ಇಯತ್ತೆಗಾಗಿ

# ಭೂಗೋಲ

ಲೇಖಕರು

ಗಜೇಂದ್ರಗಡ ಶಾಮರಾಯರು

ಬಿ ಎ, ಬಿ ಟಿ

ಪ್ರಕಾಶಕರು :

ಎನ್ ಜಿ ಬಾಪಟ

ಮದಿಹಾಳ ಧಾರವಾಡ

೧೨ ಆಣೆ

ಭೂಗೋಲ ಕಲಿಯುವದೆಂದರೆ, ಈವರೆಗೆ ಹೊಳೆ-ಬೆಟ್ಟಗಳ, ಜಾತ್ರೆ-ಸಂತೆ ನೆರೆಯುವ ಊರುಗಳ ಹೆಸರು ಬಾಯಿ ಪಾಠ ಮಾಡಿ ಒಪ್ಪಿಸಿದರೆ ತೀರುತ್ತಿತ್ತು ಆದರೆ ಈಗ, ಈ ವಿಷಯವು ಬರಿ ಗಿಳಿಯೋದು ಆಗಿಲ್ಲ ಅದು ನಮ್ಮ ಜೀವನಕ್ಕೆ ನಿಕಟವಾಗಿ ಸಂಬಂಧಿಸಿದೆ. ಬೇರೆ ಬೇರೆ ಪ್ರದೇಶಗಳಲ್ಲಿ ಜನಜೀವನ ಹೇಗೆ ಸಾಗಿದ? ಅವರ ಊಟ ಉಡಿಗೆ, ನಡೆನುಡಿ, ಕೆಲಸ ಬೊಗಸೆ ಏನು? ಈ ವಿಷಯಗಳು ಅಲ್ಲಲ್ಲಿಯ ಮಳೆ ಬೆಳೆ ಹವಾಮಾನಗಳಿಗೆ ಹೇಗೆ ಹೊಂದಿಕೊಂಡಿವೆ? ಇವೆಲ್ಲ ವಿಷಯಗಳೂ ನಿಮಗೆ ತಿಳಿದಿರಬೇಕು ಇದು ಭೂಗೋಲದ ಅಭ್ಯಾಸ ಇವನ್ನೆಲ್ಲ ಹೊಸ ಬಗೆಯಲ್ಲಿ ಈ ಪುಸ್ತಕದೊಳಗೆ ಹೇಳಿದೆ, ಅದಕ್ಕೆ ತಿಳಿಯಾದ ಸವಿಯಾದ ಭಾಷೆಯನ್ನೇ ಬಳಸಿದ ಭೂಗೋಲ ಅಭ್ಯಾಸ ಇನ್ನೂ ಸುಲಭವಾಗುವುದಕ್ಕಾಗಿ ಹೇರಳವಾಗಿ ಚಿತ್ರಗಳನ್ನೂ ನಕ್ಷೆಗಳನೂ ಒದಗಿಸಿದ ಇದರ ಲಾಭ ನೀವು ಪಡೆಯಿರಿ

ಹುಬ್ಬಳ್ಳಿ ⎫ ನಿಮ್ಮೆಲ್ಲರ ಹಿತೈಷಿ
೧-೧೦-೧೯೫೪ ⎭ **ಗಜೇಂದ್ರಗಡ ಶಾಮರಾಯ**

## ಪ್ರಕಾಶಕರ ಅರಿಕೆ

ಶಿಕ್ಷಣ ಖಾತೆಯವರು ನಿರ್ದೇಶಿಸಿದ ಹೊಸ ಅಭ್ಯಾಸ ಪತ್ರಿಕೆಯಂತೆ ೪ನೆಯ ವರ್ಗಕ್ಕಾಗಿ ರಚಿಸಿದ 'ಅಭಿನವ ಭೂಗೋಲ' ವನ್ನು ಬಾಲಕರ ಕೈಗೆ ಕೊಡುತ್ತಿದ್ದೇವೆ ಕೇವಲ ಭೂವರ್ಣನೆ ಭೂಗೋಲವಾಗಲಾರದು ಅಲ್ಲಲ್ಲಿಯ ಜನಜೀವನದ ಪರಿಚಯಕ್ಕೆ ಹೆಚ್ಚಿನ ಪ್ರಾಧಾನ್ಯವಿರಬೇಕು ಎಂಬ ಹೊಸ ದೃಷ್ಟಿಯಿಂದ ಈ ಪಠ್ಯಪುಸ್ತಕವನ್ನು ಪರಿಪೂರ್ಣಗೊಳಿಸಲು ತುಂಬಾ ಪರಿಶ್ರಮ ವಹಿಸಲಾಗಿದೆ

ಇದನ್ನು ಬರೆದವರು ಶ್ರೀ ಗಜೇಂದ್ರಗಡ ಶಾಮರಾಯರು ಬಿ ಎ, ಬಿ ಟಿ ಅಧ್ಯಾಪನದಲ್ಲಿಯೇ ? ವನ್ನು ಸವೆಸಿದವರು ಬಾಲಕರ ಮನವನ್ನು ಅರಿತವರೂ ಬಾಲಭಾಷೆಯ ಬರೆಹದಲ್ಲಿ ನುರಿತವರೂ ಆಗಿದ್ದಾರೆ ಎಂದಮೇಲೆ ಪುಸ್ತಕದ ಹಿರಿಮೆಯ ಬಗ್ಗೆ ಬೇರೆ ಹೇಳಬೇಕಾಗಿಲ್ಲ ಅಲ್ಲದೆ ಬಾಲಶಿಕ್ಷಣದಲ್ಲಿ ಜೀವಾಳದ ಮಾತಾದ ಚಿತ್ರ-ನಕ್ಷೆಗಳನ್ನು ಅಲ್ಲಲ್ಲಿ ಕೊಟ್ಟಿದ್ದೇವೆ. ಈ ಪುಸ್ತಕವು ನಮ್ಮ ಬಾಲಕರಿಗೆ ಉಪಯುಕ್ತವಾಗಿ, ನಮ್ಮ ಶ್ರಮ ಸಫಲವಾಗುವುದೆಂದು ನಂಬಿದ್ದೇವೆ

೧-೧೦-೫೪ } —ಪ್ರಕಾಶಕ

# ಅನುಕ್ರಮಣಿಕೆ



———

# ಭಾರತದಲ್ಲಿ
# ಮುಂಬಯಿ ರಾಜ್ಯದ ಸ್ಥಾನ



ಪ್ರಕರಣ ೧

# ಜಿಲ್ಹೆ—ರಾಜ್ಯ

ವಿದ್ಯಾರ್ಥಿಗಳೇ, ನೀವು ಮೇಲಿನ ಇಯತ್ತೆಗೆ ಬಂದು ಬಿಟ್ಟಿರುವಿರಿ ನಿಮ್ಮ ಅನುಭವ ಹೆಚ್ಚುತ್ತಲಿದೆ ನಿಮ್ಮ ಜ್ಞಾನ ಬೆಳೆಯುತ್ತಲಿದೆ ನಿಂತ ನೀರಿನಲ್ಲಿ ನೀವು ಅನೇಕ ಸಲ ಒಂದು ಸಣ್ಣ ಕಲ್ಲನ್ನು ಒಗೆದಿರಬಹುದು ಆಗ ನೀರಿನಲ್ಲಿ ಉಂಟಾಗುವ ವರ್ತುಲಾಕಾರದ ತೆರೆಗಳನ್ನು ನೀವು ನೋಡಿರುವಿರಾ? ವರ್ತುಲಗಳು ದೊಡ್ಡವಾಗುತ್ತ ನೀರಿನ ತುದಿಯಂಚಿನ ವರೆಗೆ ಹೋಗಿ ತಾಕುವವು ಇದೇ ರೀತಿಯಲ್ಲಿ—ನಿಮ್ಮ ನಿರೀಕ್ಷಣೆ, ಅನುಭವಗಳು ವಿಸ್ತಾರ ವಾಗುತ್ತ ಹೋಗಬೇಕು ಅದರಿಂದಲೇ ನಿಮ್ಮ ಜ್ಞಾನ ಬೆಳೆಯುವದು

## ಮುಂಬಯಿ ರಾಜ್ಯ

ಹಿಂದಿನ ಇಯತ್ತೆಗಳಲ್ಲಿ ನೀವು ನಿಮ್ಮ ಊರು, ನಿಮ್ಮ ತಾಲೂಕು, ನಿಮ್ಮ ಜಿಲ್ಹೆ—ಇವುಗಳ ಬಗೆಗೆ ನಾಕಷ್ಟು ತಿಳಿದುಕೊಂಡಿರುವಿರಿ ಕೆಲವು




ಆಕೃತಿ ೧ ಮುಂಬಯಿ ರಾಜ್ಯವೂ ಅದರ ನೆರೆಯ ಮೇಲಿನ ರಾಜ್ಯಗಳೂ

ತಾಲೂಕುಗಳನ್ನು ಕೂಡಿಸಿ ಒಂದು ಜಿಲ್ಹೆಯನ್ನು ಮಾಡಿರುವಂತೆ, ಕೆಲವು

ಜಿಲ್ಹೆಗಳನ್ನು ಕೂಡಿಸಿ ಒಂದು 'ರಾಜ್ಯ'ವನ್ನು ನಿರ್ಮಿಸಿದ್ದಾರೆ ನಮ್ಮದು ಮುಂಬಯಿ ರಾಜ್ಯ. ಅದು ಭಾರತದ ಒಂದು ಭಾಗವಾಗಿರುವದು

ವಿಸ್ತಾರವಾದ ದೇಶವನ್ನು ಒಡೆದು ಹೀಗೆ ವಿಭಾಗಗಳನ್ನು ಏಕೆ ಮಾಡುವರೆಂಬುದು ನಿಮಗೆ ಗೊತ್ತೇ? ಹೀಗೆ ಮಾಡುವದು 'ಆಡಳಿತದ ಅನುಕೂಲತೆ'ಗಾಗಿ. ಸರಕಾರದ ಕೆಲಸವನ್ನು ಹೀಗೆ ಮೇಲಿನಿಂದ ಕೆಳಗೆ ಹಂಚುವರು ಇದರಿಂದ ಆಡಳಿತದ ಕೆಲಸವು ಅಚ್ಚುಕಟ್ಟಾಗಿ ನಡೆಯುವದು ಆಡಳಿತದ ಅನುಕೂಲತೆಗಾಗಿ ಮಾಡಿದ ಇಂಥ ವಿಭಾಗಗಳಿಗೆ 'ರಾಜಕೀಯ ವಿಭಾಗ'ಗಳೆನ್ನುವರು ಅವಶ್ಯವೆನಿಸಿದರೆ ಈ ರಾಜ್ಯಗಳ ಪ್ರದೇಶವನ್ನು ಸರಕಾರವು ಹೆಚ್ಚುಕಡಿಮೆ ಮಾಡಬಹುದು ಹೊಸದಾದ ಭಾಗಗಳನ್ನು ಹೊಂದಿಸಬಹುದು ಇಲ್ಲವೆ ಇದ್ದವುಗಳಲ್ಲಿ ಕಡಿಮೆ ಮಾಡಬಹುದು ಆದುದರಿಂದ ಈ 'ರಾಜಕೀಯ ವಿಭಾಗ'ಗಳು ಸ್ಥಿರವಾದವುಗಳೆಂದು ಹೇಳ ಬಾರದು

## ಸ್ವಾಭಾವಿಕ ಪ್ರದೇಶ

ಆದರೆ ದೇವನು ಸೃಷ್ಟಿಸಿದ ಕೆಲವೊಂದು ಸಂಗತಿಗಳಿರುವವು ಭೂಮಿಯ ಏರು-ಇಳಿತ, ಹವೆ, ಮಳೆ, ಬೆಳೆಗಳು- ಇವುಗಳಲ್ಲಿ ಕೆಲವು 'ನಿಸರ್ಗ'ವೆಂದು ಇವುಗಳಿಗೆ ಒಟ್ಟು ಹೆಸರು ಒಂದೇ ವಿಧನಾದ ನಿಸರ್ಗದ ಈ ಸಂಗತಿಗಳಿಗೆ ಹೊಂದಿಕೆಯಾಗುವಂತ ಕೂಡಿಸಿದ ಪ್ರದೇಶಗಳಿಗೆ 'ಸ್ವಾಭಾವಿಕ ಪ್ರದೇಶ'ಗಳೆಂದು ಹೇಳುವರು ಸ್ವಾಭಾವಿಕ ಪ್ರದೇಶಗಳು ಸೃಷ್ಟಿಯ ಸ್ಥಿರವಾದ ಸಂಗತಿಗಳನ್ನೇ ಅವಲಂಬಿಸಿರುವವು ಆದುದರಿಂದ ಅವುಗಳೂ ಸ್ಥಿರವಾಗಿರುವವು ನಮ್ಮ ಊಟ, ಉಡಿಗೆ ಹಾಗೂ ಉದ್ಯೋಗಗಳು ನಮ್ಮ ಸುತ್ತಲಿನ ಸೃಷ್ಟಿಯ ಸಂಗತಿಗಳಿಗೆ ಹೇಗೆ ಹೊಂದಿಕೊಂಡಿರುವವೆಂಬುದನ್ನು ನೀವು ಭೂಗೋಲ ವಿಷಯದಿಂದ ಹೆಚ್ಚಾಗಿ ತಿಳಿದುಕೊಳ್ಳಬೇಕು

**ಆಕಾರ-ಅಳತೆ :—** ನಾವಿರುವದು 'ಮುಂಬೈರಾಜ್ಯ'ವೆಂದು ನೆನಪಿನಲ್ಲಿ ಇಡಿರಿ. ಇದು ಭಾರತದ ಒಂದು ಭಾಗವಾಗಿದೆ ಈ ಪ್ರದೇಶದಲ್ಲಿರುವ ಜನರಿಗೆಲ್ಲ ನಮ್ಮ ಈ ರಾಜ್ಯವು ಒಂದು ಮನೆಯಂತಿರುವದು ಇಷ್ಟು ಜನರು ವಾಸಮಾಡುತ್ತಿರುವ ನಮ್ಮ ರಾಜ್ಯವಾದ ಈ ಮನೆ ಚಿಕ್ಕದಾಗಿರದು ಅದು ವಿಶಾಲವಾಗಿದೆ ಭಾರತದ ದೊಡ್ಡ ಭಾಗಗಳಲ್ಲಿ ಇದು ಒಂದಾಗಿದೆ ಹಿಂದೆ ನಮ್ಮ ದೇಶವನ್ನಾಳಿದ ಇಂಗ್ಲಿಷ ಜನರ ಮೂಲ ಭೂಮಿಯಾದ ಇಂಗ್ಲಂಡ

ದಷ್ಟೇ ನಮ್ಮ ಮುಂಬಯಿ ಪ್ರಾಂತವು ವಿಸ್ತಾರವಾಗಿದೆ ನೀವಿರುವ ಜಿಲ್ಹೆಯ ಉದ್ದಳತೆ, ಕ್ಷೇತ್ರಫಲ ನಿಮಗೆ ಗೊತ್ತಿವೆಯಲ್ಲವೆ? ಮುಂಬಯಿ ರಾಜ್ಯವು ನಿಮ್ಮ ಜಿಲ್ಹೆಗಿಂತಲೂ ಎಷ್ಟೋ ಪಟ್ಟು ದೊಡ್ಡದಾಗಿದೆ ನಮ್ಮ ರಾಜ್ಯದ ಬಾಹ್ಯ ರೇಷೆಯನ್ನು, ಆಕಾರವನ್ನು ನಕಾಶದಲ್ಲಿ ನೋಡಿರಿ ಕೋಲಿಗೆ ಕಟ್ಟಿದ ಪಣತಿಯಂತೆ— ದೇವರ ಎದುರಿನ ನಂದಾದೀಪದಂತೆ ಅದು ನಿಮಗೆ ಅಂದ ವಾಗಿ ಕಾಣುವದಲ್ಲವೆ?

**ಮೇರೆಗಳು**—ನೀವಿರುವ ಮನೆಯ ನೆರೆಹೊರೆಯ ಹಾಗೂ ಸುತ್ತಲೂ ಹೊಂದಿಕೊಂಡಿರುವ ಮನೆತನಗಳು ಯಾವವು ಎಂಬುದನ್ನು ನೀವು ಬಲ್ಲಿರಿ ಅವು ನಿಮಗೆ ಗೊತ್ತಿರಬೇಕಲ್ಲವೇ? ನಿಮ್ಮ ರಾಜ್ಯದ ನೆರೆಹೊರೆಯ ಹಾಗೂ ಸುತ್ತಲಿನ ಪ್ರದೇಶಗಳು ಯಾವು? ಏನಿವೆ? ಎಂಬುದನ್ನು ನೀವು ತಿಳಿದು ಕೊಳ್ಳಬೇಕು ಒಂದು ರಾಜ್ಯಕ್ಕೆ ಸುತ್ತಲೂ ಹೊಂದಿದ ಭಾಗಗಳಿಗೆ 'ಮೇರೆ ಗಳು—ಗಡಿನಾಡುಗಳು' ಎಂದು ಹೇಳುವದುಂಟು ನಮ್ಮ ಮುಂಬಯಿ ರಾಜ್ಯಕ್ಕೆ ಬೇರೆ ಕೆಲವು ರಾಜ್ಯಗಳೂ ಹೊಂದಿಕೊಂಡಿರುವವು ಮುಂಬಯಿ ರಾಜ್ಯದ ಮೇರೆಗಳನ್ನು ನಕಾಶದಲ್ಲಿ ನೀವೆ ನೋಡಿ ಹೇಳಬಹುದಲ್ಲವೆ? ಉತ್ತರದಿಂದ ಕೆಳಗೆ ದಕ್ಷಿಣಕ್ಕೆ ಬನ್ನಿರಿ ರಾಜ್ಯದ ಒಂದು ಸುತ್ತುಹಾಕಿರಿ ಉತ್ತರಕ್ಕೆ ರಾಜಸ್ಥಾನವಿದೆ ಪೂರ್ವದ ಗಡಿಗಳಾಗಿ—ಮಧ್ಯಭಾರತ, ಮಧ್ಯಪ್ರದೇಶ, ಹೈದರಾಬಾದ ರಾಜ್ಯಗಳು ಹಬ್ಬಿವೆ ದಕ್ಷಿಣಕ್ಕೆ ಮದ್ರಾಸ, ಮೈಸೂರು ರಾಜ್ಯಗಳು ನೆಲಸಿವೆ ಪಶ್ಚಿಮದ ಅಂಚಿನಲ್ಲಿ ಅರಬೀ ಸಮುದ್ರವೂ ಅದರ ಮೇಲ್ಭಾಗದಲ್ಲಿ ಸೌರಾಷ್ಟ್ರವೂ ಈ ರಾಜ್ಯದ ಸೀಮೆಗಳಾಗಿ ಹಬ್ಬಿವೆ.

## ಅಭ್ಯಸನಗಳು

೧ ಸ್ವಾಭಾವಿಕ ವಿಭಾಗಗಳು ಯಾವ ಸಂಗತಿಗಳನ್ನು ಅವಲಂಬಿಸಿರುವವು?

೨ ಸ್ವಾಭಾವಿಕ ಹಾಗೂ ರಾಜಕೀಯ ವಿಭಾಗಗಳಲ್ಲಿ ಯಾವು ಸ್ಥಿರವಾದವುಗಳು? ಏಕೆ?

೩ ಮುಂಬಯಿ ರಾಜ್ಯದ ಎರಡು 'ಸ್ವಾಭಾವಿಕ' ಮೇರೆಗಳು ಯಾವು?

ಪ್ರಕರಣ ೨

# ಮುಂಬಯಿ ರಾಜ್ಯದ ಸಾಮಾನ್ಯ ವಿಭಾಗಗಳು

ಈ ರಾಜ್ಯದ ಪರಿಳಿತಗಳು ಎಲ್ಲಿವೆ ? ಬೆಟ್ಟಬಯಲುಗಳು ಯಾವು ? ಮಳೆ, ಬೆಳೆ, ಹವೆಗಳು ಎಲ್ಲಿ ಸಮಾನವಾಗಿವೆ ? ಎಲ್ಲಿ ಬೇರೆ ಬೇರೆಯಾಗಿವೆ ? ಈ ವಿವಿಧ ವಿಭಾಗಗಳಲ್ಲಿ ಜನರು ತಮ್ಮ ಜೀವನವನ್ನು ಹೇಗೆ ಸಾಗಿಸುತ್ತಿರುವರು ? ಇವೆಲ್ಲವುಗಳನ್ನು ತಿಳಿದುಕೊಳ್ಳಲು ಈ ರಾಜ್ಯದಲ್ಲಿ ಒಂದೇ ಬಗೆಯಾದ ಭೌಗೋಲಿಕ ಪ್ರದೇಶಗಳನ್ನು ನಾವು ನಿರೀಕ್ಷಿಸಬೇಕು ಹಿಂದೆ ಹೇಳಿದಂತೆ ಇವುಗಳಿಗೆ–'ಸ್ವಾಭಾವಿಕ–ನೈಸರ್ಗಿಕ–ಪ್ರದೇಶಗಳೆಂದು ಹೇಳುವದುಂಟು ಇಲ್ಲಿ ನೀವು ಒಂದು ಮಾತನ್ನು ಸೆನಪಿನಲ್ಲಿ ಇಡಬೇಕು ನಿಮ್ಮ ಹೊಲದ ಬಾಂದುಕಲ್ಲುಗಳಂತೆ ಈ ಪ್ರದೇಶಗಳಿಗೆ ಬಾಂದುಕಲ್ಲುಗಳನ್ನು ಹಾಕಲು ಬಾರದು. ಇವು ಒಂದಕ್ಕೊಂದು ಕ್ರಮೇಣ ಸುಸುಳಿಕೊಂಡಿರುವವು. ಬೆಳವಲುನಾಡಿನಿಂದ ಮಲೆನಾಡಿನ ಕಡೆಗೆ ನೀವು ಪ್ರವಾಸಮಾಡಿರಿ ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗಿ ಬನ್ನಿರಿ ನೀವು ಮಲೆನಾಡಿನ ಕಡೆಗೆ ಹೋದಂತ ಗಿಡಗಂಟಿಗಳು, ಪೈರುಗಳು, ಹವೆ ಮಳೆಗಳು ಹೇಗೆ ಕ್ರಮೇಣ ಹೆಚ್ಚು ಕಡಿಮೆಯಾಗುವವೆಂಬುದು ನಿಮ್ಮ ನಿರೀಕ್ಷಣೆಯಲ್ಲಿ ಬರುವದು ಬಳವಲದ ಜೀವುಜಾಲಿಗಳು–ನೀವು ಮಲೆನಾಡಿನ ಕಡೆಗೆ ಹೋದಂತೆ ಮಾಯವಾಗುವವು ಹರವಾದ ಎಲೆಯ ಹಸಿರು ಬನಗಳು ಹೆಚ್ಚೆಚ್ಚು ದಟ್ಟಸಾಗುತ್ತ ಹೋಗುವವು

ನೀವು ಒಂದು ಕಟ್ಟಡವನ್ನು ನೋಡಲು ಹೊರಡುವಿರಿ ಮೊದಲು ದೂರದಿಂದಲೇ ನಿಮಗೆ ಅದು ಕಾಣುವದು 'ಓಹೊ ಇದು ಒಳ್ಳೇ ಎತ್ತರವಾಗಿದೆ, ಗೋಲಾಕಾರವಾಗಿದೆ'–ಹೀಗೆ ಅದರ ಸಾಮಾನ್ಯ ಸ್ವರೂಪವನ್ನು ನೀವು ಕಂಡುಕೊಳ್ಳುವಿರಿ ಆಮೇಲೆ ಅದೇ ಕಟ್ಟಡದಲ್ಲಿ ಪ್ರವೇಶಿಸಿ ಮೂಲೆ ಮೂಲೆಗಳಲ್ಲಿ ನಿಂತು ನೋಡುವಿರಿ, ಅದರ ಎಲ್ಲ ವಿವರಗಳನ್ನು ತಿಳಿದುಕೊಳ್ಳುವಿರಿ. ಹೀಗೆಯೇ ನಮ್ಮ ಮುಂಬಯಿರಾಜ್ಯವನ್ನು ನಾವು ದೂರದಿಂದ ಮೊದಲು ನೋಡೋಣ. ಆಮೇಲೆ ಉಳಿದ ಸಂಗತಿಗಳನ್ನು ವಿಶದವಾಗಿ ತಿಳಿದುಕೊಳ್ಳೋಣ

ಮುಂಬಯಿ ರಾಜ್ಯವು ಭಾರತದ ಒಂದು ಭಾಗವಲ್ಲವೆ ? ನಕಾಶವನ್ನು ನೋಡಿರಿ (ಆಕೃತಿ ೧) ಭಾರತದಲ್ಲಿ ನಮ್ಮ ರಾಜ್ಯದ ಸ್ಥಾನವು ಹೇಗಿದೆ ? ಎಲ್ಲಿದೆ ಎಂಬುದು ನಿಮಗೆ ಗೊತ್ತಾಗುವದು ಮುಂಬಯಿರಾಜ್ಯವು ಭಾರತದ ಪಶ್ಚಿಮ ಅಂಚಿನಲ್ಲಿರುವದು. ಅರಬೀಸಮುದ್ರದ ದಂಡೆಗುಂಟ ಹಬ್ಬಿರುವದು

ಗುಜರಾತವು ಈ ರಾಜ್ಯದ ಮೇಲಿನ ಉತ್ತರ ತುದಿಯು, ಕೊಂಕಣವು ದಕ್ಷಿಣದ ಕೆಳಗಿನ ತುದಿಯಾಗಿದೆ

## ಗುಜರಾಥ, ಮಹಾರಾಷ್ಟ್ರ, ಕರ್ನಾಟಕ

ಒಹು ಜನರು ಆಡುವ ಭಾಷೆಯ ಮೇಲಿಂದ ಮುಂಬಯಿ ರಾಜ್ಯದಲ್ಲಿ ಸಾಮಾನ್ಯವಾಗಿ ಮೂರು ವಿಭಾಗಗಳನ್ನು ಮಾಡುವರು ೧ ಗುಜರಾಥ, ೨. ಮಹಾರಾಷ್ಟ್ರ, ೩ ಕರ್ನಾಟಕ ಬಹುಜನ ಸಮಾಜದ ಭಾಷೆ ಗುಜ



ಆಕೃತಿ ೨. ಮುಂಬಯಿ ರಾಜ್ಯದ ಸಾಮಾನ್ಯ ವಿಭಾಗಗಳು

ರಾಥದಲ್ಲಿ ಗುಜರಾಥೀ, ಮಹಾರಾಷ್ಟ್ರದಲ್ಲಿ ಮರಾಠಿ, ಕರ್ನಾಟಕದಲ್ಲಿ ಕನ್ನಡ ಒಂದು ಪ್ರದೇಶದಲ್ಲಿ ಬಹು ಜನರು ಆಡುವ ಬಳಕೆಯ ಭಾಷೆಗೆ ಅಲ್ಲಿಯ ‘ ಪ್ರಾದೇಶಿಕ ಭಾಷೆ ’ಯೆನ್ನುವರು. ಮುಂಬಯಿ ರಾಜ್ಯದ ಬಗ್ಗೆ ಹೆಚ್ಚು

ವಿವರಗಳನ್ನು ತಿಳಿದುಕೊಳ್ಳುವಾಗ್ಗೆ, ನಾವು ಈ ಮೂರು ವಿಭಾಗಗಳನ್ನೇ ನಮ್ಮ ಕಣ್ಣೆದುರು ಇಟ್ಟುಕೊಳ್ಳೋಣವಂತೆ.

## ಅಭ್ಯಸನಗಳು

೧ 'ಸ್ವಾಭಾವಿಕ ಪ್ರದೇಶಗಳು ಕ್ರಮೇಣ ಬದಲಿಸುವವು.' ಈ ಮಾತನ್ನು ಉದಾಹರಣೆ ಸಹಿತ ತಿಳಿಸಿರಿ

೨ ಒಂದು ಪ್ರದೇಶದ ಜನಜೀವನವನ್ನು ತಿಳಿದುಕೊಳ್ಳಲು ಅಲ್ಲಿಯ ಯಾವ ಭೌಗೋಲಿಕ ಸಂಗತಿಗಳನ್ನು ನಾವು ಗೊತ್ತುಮಾಡಿಕೊಳ್ಳಬೇಕು ?

೩ ಭಾರತದಲ್ಲಿ ಮುಂಬಯಿ ರಾಜ್ಯವು ಯಾವ ಭಾಗದಲ್ಲಿರುವದು ?

೪ ಮುಂಬಯಿ ರಾಜ್ಯದ ಸಾಮಾನ್ಯ ವಿಭಾಗಗಳು ಯಾವವು ?

ಪ್ರಕರಣ ೩

# ಪರ್ವತಗಳು

ಮುಂಬಯಿ ರಾಜ್ಯದ ಈ ನಕಾಶವನ್ನು ನೋಡಿರಿ ಈ ರಾಜ್ಯದ ಭೂಮಿಯ ಏರಿಳಿತಗಳನ್ನು ಇದರಲ್ಲಿ ತೋರಿಸಿದೆ. ಇಕೊ, ಇಲ್ಲಿಯ ಬೆಟ್ಟಗಳು ಮೊದಲು ನಿಮ್ಮನ್ನು ಕೈಮಾಡಿ ಕರೆಯುವಂತಿವೆ ಉತ್ತರದಿಂದ ದಕ್ಷಿಣಕ್ಕೆ ಕ್ರಮವಾಗಿ ಸಾಗಿರಿ. ಕಾಠಿಯಾವಾಡದ ಮಧ್ಯದಲ್ಲಿ ಕಾಣುವದು ಗಿರಿನಾರ ಪರ್ವತವು ಇದಕ್ಕ ಪರ್ವತವೆನ್ನುವದಕ್ಕಿಂತಲೂ ಬೆಟ್ಟವೆನ್ನುವದೇ ಲೇಸು ಗಿರಿನಾರದ ಕಾಡುಗಳಲ್ಲಿ ಕಾಡುಮೃಗಗಳಿರುವವು ಇಂದು ಅಪರೂಪವೆಂದು ಹೇಳಲಾಗುವ ನಿಜವಾದ ಸಿಂಹವು ಗಿರಿನಾರದ ಕಾಡುಗಳಲ್ಲಿ ಕಂಡುಬರುವದು ಗಿರಿನಾರದ ಗುಹೆಗಳಲ್ಲಿ ತಪಸ್ವಿಗಳಾದ ಜೈನಧರ್ಮದ ಯತಿಗಳು ವಾಸಿಸುವರು. ಜೈನರಿಗೆ ಪೂಜ್ಯವಾದ ಅನೇಕ ಬಸದಿಗಳೂ ಈ ಬೆಟ್ಟಗಳಲ್ಲಿ ಇರುವವು

ಇಲ್ಲಿ ನೋಡಿರಿ ಗುಜರಾಥದ ಹೊರ ಅಂಚಿಗೆ ಹೊಂದಿಕೊಂಡಿರುವ ಮತ್ತೊಂದು ಪರ್ವತವನ್ನು ನೀವು ಕಾಣುವಿರಿ. ಇದು ಅರವಲಿ ಪರ್ವತವು. ನಮ್ಮಲ್ಲಿ ಹರೆಯದವರೂ, ಮುಪ್ಪಿನವರೂ ಇರುವಂತೆ, ಪರ್ವತಗಳಲ್ಲಿಯೂ ಇರುವದು ಸೋಜಿಗವಲ್ಲವೇ ? ಅರವಲಿ ಪರ್ವತವು ಉಳಿದ ಪರ್ವತಗಳಿಗಿಂತಲೂ ಮೊದಲು ರಚಿತವಾದುದು. ಅಂತೆಯೇ ಇದು ಒಳ್ಳೇ ಪ್ರಾಚೀನ

ವಾದ ಶಿಲೆಯಿಂದ ಉಂಟಾದ ಪರ್ವತವು ಅರವಲಿ ಪರ್ವತವು ರಜಪೂತ ರಾಜರಿಗೆ ದೊಡ್ಡ ಆಸರವಾಗಿತ್ತು ಅವರ ಅನೇಕ ಸಾಹಸದ ಕೃತಿಗಳು ಇಲ್ಲಿಯೇ ಜರುಗಿದವು




ಆಕೃತಿ ೬. ಮುಂಬಯಿ ರಾಜ್ಯದ ಪರ್ವತಗಳು

ಗುಜರಾಥದ ನಡುವೆ ಒರಗಿದ ಇನ್ನೊಂದು ಪರ್ವತವು ಇಲ್ಲಿದೆ ಇದೇ ವಿಂಧ್ಯಾದ್ರಿಯು ಭಾರತಮಾತೆಯ ಒಡ್ಯಾಣವೆಂದು ಕವಿಗಳು ಇದನ್ನು ವರ್ಣಿಸಿರುವರು. ವಿಂಧ್ಯಾದ್ರಿಯ ದಕ್ಷಿಣಕ್ಕೆ ಸಮಾಂತರವಾಗಿ ಹಬ್ಬಿದ ಇನ್ನೊಂದು ಬೆಟ್ಟದ ಸಾಲನ್ನು ನೀವು ನೋಡುವಿರಿ. ಇದು ಸಾತಪುಡಾ ಪರ್ವತವು ಈ ಬೆಟ್ಟದ ಸಾಲುಗಳು ಗುಜರಾಥದಲ್ಲಿಯೂ ಮಹಾರಾಷ್ಟ್ರದ ಉತ್ತರಭಾಗದಲ್ಲಿಯೂ ಚಾಚಿಕೊಂಡಿರುವವು.

ಕೊನೆಗೆ ನಿಮಗೆ ಕಾಣುವದು ಸಹ್ಯಾದ್ರಿಯು ಇದಕ್ಕೆ ಪಶ್ಚಿಮಘಟ್ಟ ವೆಂತಲೂ ಕರೆಯುವರು. ಸಹ್ಯಾದ್ರಿಯು ಅರಬೀ ಸಮುದ್ರದ ದಂಡೆಗುಂಟ

ತುಸು ಅಂತರದಲ್ಲಿ ದಕ್ಷಿಣೋತ್ತರನಾಗಿ ಹಬ್ಬಿರುವದು. ಮುಂಬಯಿ ರಾಜ್ಯ ದಲ್ಲಿ ಸಹ್ಯಾದ್ರಿಯ ತೀರ ಉನ್ನತವಾದ ಶಿಖರವು 'ಕಳಸೂಬಾಯಿ' ಎಂಬುದು. ೫೪೦೦ ಫೂಟು ಎತ್ತರವಾದ ಈ ಶಿಖರವು ನಾಶಿಕ ಜಿಲ್ಹೆಯಲ್ಲಿ ಇರುವದು ತಿಳಿದು ನೋಡಿದರೆ, ಪಶ್ಚಿಮ ಘಟ್ಟಗಳು ನಿಜವಾದ ಪರ್ವತಗಳೇ ಆಗಿರುವದಿಲ್ಲ ದಕ್ಷಿಣದ ತಪ್ಪಲಿನ ಎತ್ತರವಾದ ಪ್ರದೇಶದ, ಹೊರ ಅಂಚು ಕೆಳಗಿನವರಿಗೆ ಪರ್ವತದಂತೆ ತೋರುವದು

ಈ ಬೆಟ್ಟಗಳು ದೇಶದ ಬೇರೆ ಬೇರೆ ಭಾಗಗಳ ನಡುವೆ ನಿಲ್ಲಿಸಿದ ಗೋಡೆ ಗಳಂತೆ ಕಾಣುವದಿಲ್ಲವೆ? ನಿಜ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಜನರು ಹಾಗು ಸರಕುಗಳನ್ನು ಸಾಗಿಸಲಿಕ್ಕೆ ಇವುಗಳಿಂದ ತಡೆಯಾಗುವದು ರಾಜಮಾರ್ಗಗಳನ್ನು ರಚಿಸುವದಕ್ಕೂ ತೊಂದರೆಯಾಗುವದು ಆದರ ಸೃಷ್ಟಿಯು ಇಲ್ಲಿಯೂ ನಮಗೆ ಒಂದು ಅನುಕೂಲತೆಯನ್ನು ಮಾಡಿಕೊಟ್ಟಿರು ವದು ಗೋಡೆಗಳಂತಿರುವ ಈ ಬೆಟ್ಟಗಳಲ್ಲಿ ಅಲ್ಲಲ್ಲಿ ಬಿರುಕುಗಳಿವೆ, ಖಿಂಡಿ ಗಳಿವೆ ಇವುಗಳಿಗೆ ಕಣವೆಗಳನ್ನುವರು ಈ ಕಣಿವೆಗಳಲ್ಲಿ ರಚಿಸಿದ ಮಾರ್ಗ ಗಳಿಗೆ ಘಟ್ಟದ ಮಾರ್ಗಗಳನ್ನುವರು ನದಿಗಳಿಗ ಪಾವಟಿಗೆಗಳನ್ನು ಕಟ್ಟಿರು ವದನ್ನು ನೀವು ಕೆಲವು ಕಡೆಗೆ ನೋಡಿರುವಿರಲ್ಲವೆ? ಅವುಗಳಿಗೂ 'ಘಾಟು' ಗಳೆನ್ನುವರು ಬೆಟ್ಟಗಳಿಂದ ಮೆಟ್ಟಲು ಮೆಟ್ಟಲುಗಳಾಗಿ ಕೆಳಗೆ ಇಳಿದು ಬರುವ ಮಾರ್ಗಗಳೆ 'ಘಟ್ಟಗಳು' ಸ್ವಾಭಾವಿಕವಾದ ಇಂಥ ಘಟ್ಟಗಳಿರದಿದ್ದರೆ, ಬೆಟ್ಟಗಳನ್ನು ಕೊರೆದು ಮಾರ್ಗಗಳನ್ನು ರಚಿಸುವರು ಇವುಗಳಿಗೆ ಸುರಂಗದ ಮಾರ್ಗಗಳೆನ್ನುವರು ಇವುಗಳಾದರೂ ಒಂದು ಬಗೆಯ ಕೃತ್ರಿಮವಾದ ಕಣಿವೆಗಳು ಇಂಥ ಸುರಂಗದ ಮಾರ್ಗಗಳ ಸಹಾಯದಿಂದ ರೇಲುಮಾರ್ಗ ಗಳು—ಬೆಟ್ಟಗಳನ್ನು ಸುತ್ತಿ ಹೋಗುವದನ್ನು ತಪ್ಪಿಸಲು ಸಾಧ್ಯವಾಗುವದು ಪುಣೆ, ಮುಂಬಯಿಗಳ ನಡುವೆ ಸಹ್ಯಾದ್ರಿಯನ್ನು ಹೀಗೆ ಅನೇಕ ಕಡೆಯಲ್ಲಿ ಆರುವಾರು ಕೊರೆದು ಮಾಡಿದ ಗವಿಗಳಲ್ಲಿ ರೇಲು ಮಾರ್ಗವು ಹೋಗಿರುವದು. ಇವುಗಳಿಗೆ 'ಬೊಗದೆ' ಗಳೆನ್ನುವರು ಹುಬ್ಬಳ್ಳಿ—ಧಾರವಾಡಗಳ ನಡುವೆ ಸಣ್ಣದೊಂದು ಬೆಟ್ಟವನ್ನು ಇಬ್ಬದಿಗಳಾಗಿ ಕೊರೆದು ರೇಲುಮಾರ್ಗವನ್ನು ಹಾಕಿರುವರು ಸಹ್ಯಾದ್ರಿಯಲ್ಲಿ ನಾಶಿಕದ ಹತ್ತರ ಥಳಘಟ್ಟವೆಂಬುದೂ, ಖಂಡಾಳಾದ ಹತ್ತರ ಬೋರಘಟ್ಟವೆಂಬುದೂ, ಪ್ರಸಿದ್ಧವಾಗಿವೆ. ಬೆಳಗಾಂವಿ ಯಿಂದ ಗೋವೆಯ ದಾರಿಯಲ್ಲಿ ತಿನೈಘಟ್ಟವೂ ಧಾರವಾಡದಿಂದ ಕಾರವಾರದ ದಾರಿಯಲ್ಲಿ ಅರಬೈಲಘಟ್ಟವೂ ಇರುವವು

ಬೆಟ್ಟಗಳನ್ನು ಏರಿಹೋಗುವದು ಎಂಥ ಪ್ರಯಾಸ ! ಹುಲಿ ಚಿರ್ಚುಗಳ ಭಯ ಬೇರೆ ! ಏಕಿರಬೇಕಾಗಿತ್ತು ಈ ಬೆಟ್ಟಗಳು? ಎಂದು ನೀವು ಬೇಸರಪಟ್ಟು ಕೊಳ್ಳುವಿರಲ್ಲವೆ ? ಛೇ ! ಹಾಗೆನ್ನಕೂಡದು ಬೆಟ್ಟಗಳಿಂದ ನಮಗೆ ಬಗೆ ಬಗೆಯ ಉಪಯೋಗಗಳುಂಟು ನೀವು ಉಪಯೋಗಿಸುವ ಉರುವಲು-ಕಟ್ಟಿಗೆ ಎಲ್ಲಿ ಬೆಳೆಯುವದು? ಮನೆ ಕಟ್ಟಲು ಬೇಕಾಗುವ ಕಲ್ಲು ಕಟ್ಟಿಗೆ ಯಾರು ಪೂರೈಸುವರು ? ಕಬ್ಬಿಣ, ತಾಮ್ರ, ಬೆಳ್ಳಿ, ಬಂಗಾರ ಮೊದಲಾದ ಲೋಹಗಳು ಎಲ್ಲಿ ದೊರೆಯುವವು ? ಬೆಟ್ಟಗಳಿಂದಲೇ ಅಲ್ಲವೆ? ಬೆಟ್ಟಗಳು ಇದಕ್ಕಿಂತಲೂ ಹೆಚ್ಚಿನ ಕಾರ್ಯವನ್ನು ಮಾಡುವವು. ಮಳೆಗಾಳಿಗಳನ್ನು ತಡೆದು, ಬೆಟ್ಟಗಳು ಮಳೆಯನ್ನು ಸುರಿಸುವವು. ಬೆಟ್ಟಗಳ ಮೇಲೆ ಬಿದ್ದ ಮಳೆಯ ನೀರು, ಇಬ್ಬದಿಗಳಲ್ಲಿಯೂ ಹಂಚಿ ಹರಿದುಹೋಗುವದು. ಇಳು ಕಲಿನ ಚಪ್ಪರದ ಮೇಲೆ ಬಿದ್ದ ಮಳೆಯ ನೀರು ಎರಡೂ ಬದಿಗಳಲ್ಲಿಯೂ ಹರಿದು ಹೋಗುವದನ್ನು ನೀವು ನೋಡಿರುವಿರಿ ಬೆಟ್ಟಗಳು ಮಳೆಯ ನೀರನ್ನು ಹೀಗೆ ವಿಭಾಗಿಸುವದರಿಂದ, ಅವುಗಳಿಗೆ ‘ ಜಲಚ್ಛೇದ ’ ಇಲ್ಲವೆ ‘ ನೀರನೆತ್ತಿ ’ ಗಳೆಂದು ಹೇಳುವರು ಜಲಚ್ಛೇದಗಳಾದ ಈ ಬೆಟ್ಟಗಳ ಇಬ್ಬದಿಗಳಲ್ಲಿ ಅನೇಕ ನದಿಗಳು ಉಗಮ ಹೊಂದಿ ಹರಿಯುವವು

## ನದಿಗಳು

ಮುಂಬಯಿ ರಾಜ್ಯದ ನಕಾಶವನ್ನು ಮತ್ತೆ ನೋಡಿರಿ ಈ ರಾಜ್ಯದಲ್ಲಿ ಹರಿಯುವನದಿಗಳು ಯಾವು? ಅವುಗಳ ಉಗಮವು ಯಾವ ಬೆಟ್ಟಗಳಲ್ಲಿ ? ಎಂಬುದನ್ನು ನಿರೀಕ್ಷಿಸಿರಿ ಉಗಮದಲ್ಲಿ ನದಿಗಳು ಒಂದು ಚಿಕ್ಕ ಝರಿ—ಹಳ್ಳದಂತೆ ಇರುವವು ನದಿಯು ಆಗ್ಗೆ ಇನ್ನೂ ಚಿಕ್ಕ ಮಗು ಮಗುವಿನಂತೆ ಅದು ಬಂಡೆ ಬಂಡೆಗೆ ನೆಗೆಯುವದು, ನುಸುಳುವದು ಮುಂದೆ ಅನೇಕ ಝರಿಗಳಿಂದ ಕೂಡಿಕೊಂಡು ಬಲಶಾಲಿಯಾದ ಪ್ರಾಯದ ನದಿಯು ಬಂಡೆಗಳನ್ನೇ ಭೇಧಿಸುವದು ಬಯಲುಸೀಮೆಗೆ ಬಂದಮೇಲೆ ನದಿಯು ನಿಧಾನವಾಗಿ ಅಲೆದಲೆದು ಹರಿಯುವದು. ಮುಂದೆ ಸಮುದ್ರವನ್ನು ಸೇರಿಕೊಳ್ಳುವದು.

ಉತ್ತರದಿಂದ ದಕ್ಷಿಣಕ್ಕೆ ಈ ರಾಜ್ಯದ ನದಿಗಳನ್ನು ನೋಡುತ್ತ ಬನ್ನಿರಿ. ಉತ್ತರದ ನಾಲ್ಕು ನದಿಗಳು ಪಶ್ಚಿಮಕ್ಕೆ ಹರಿದು ಸ್ವತಂತ್ರವಾಗಿ ಅರಬೀ ಸಮುದ್ರವನ್ನು ಸೇರುವವು. ಈ ನದಿಗಳು ಯಾವು? ನೋಡಿರಿ ಸಾಬರಮತಿ ಮಹಿ, ನರ್ಮದೆ ಹಾಗೂ ತಾಪಿ ಇವೇ ಆ ನಾಲ್ಕು ನದಿಗಳು. ಈ ನಾಲ್ಕು ನದಿ

ಗಳಿಂದಲೂ ಗುಜರಾತಕ್ಕೆ ಪ್ರಯೋಜನ ವಿರುವದು. ಸಾಬರಮತಿ ಹಾಗೂ ಮಹಿ ನದಿಗಳು ಅರವಲೀ ಬೆಟ್ಟಗಳಲ್ಲಿ ಉಗಮಹೊಂದುವವು. ಮಾಳವಾದ ತಪ್ಪಲಿನಿಂದ ಕೆಳಗಿಳಿದು ಗುಜರಾಥದ ಬೈಲಿನಲ್ಲಿ ಹರಿದು ಇವು ಖಂಬಾಯತ ಆಖಾತದಲ್ಲಿ ಸಮುದ್ರವನ್ನು ಕೂಡುವವು



ಆಕೃತಿ ೪ ಮುಂಬಯಿ ರಾಜ್ಯದ ನದಿಗಳು

ನರ್ಮದೆಯು ಮಧ್ಯ ಪ್ರದೇಶದ ಅಮರ್ಕಂಟಕವೆಂಬಲ್ಲಿ ಉಗಮಹೊಂದುವದು ವಿಂಧ್ಯ ಹಾಗೂ ಸಾತಪುಡಾ ಪರ್ವತಗಳ ನಡುವೆ ಹರಿದು ಭಡೋಚ ಪಟ್ಟಣದ ಹತ್ತಿರ ಸಮುದ್ರಕ್ಕೆ ಕೂಡುವದು ನರ್ಮದೆಯ ಉದ್ದಳತೆಯು ೮೦೦ ಮೈಲಿನಷ್ಟಿರುವದು ಜಬ್ಬಲಪುರದ ನೆರೆಯಲ್ಲಿ ನರ್ಮದೆಯು ಸಂಗಮರವರಿ ಶಿಲೆಗಳನ್ನು ಭೇದಿಸಿಕೊಂಡು ಆ ಶಿಲೆಗಳ ಮಧ್ಯದಲ್ಲಿ ನುಗ್ಗಿರುವದು ಈ ದೃಶ್ಯವು ವಳ್ಳೇ ರಮಣೀಯವಿರುವದು ಭಡೋಚವು ನರ್ಮದೆಯು ಮುಖದಲ್ಲಿ ಇರುವದು

ತಾಪೀ ನದಿಯಾದರೂ ಮಧ್ಯಪ್ರದೇಶದೊಳಗೆ ಸಾತಪುಡಾ ಪರ್ವತದಲ್ಲಿ ಉಗಮ ಹೊಂದುವದು ಸಾತಪುಡಾ ಹಾಗೂ ಅಜಂತಾ ಬೆಟ್ಟಗಳ ನಡುವಿನ ಕೊಳ್ಳದಲ್ಲಿ ಹರಿದು ಅದು ಅರಬೀಸಮುದ್ರಕ್ಕೆ ಕೂಡುವದು ಸುರತವು ತಾಪೀ ನದಿಯ ಮುಖದಲ್ಲಿ ಇರುವದು

ನರ್ಮದಾ ಹಾಗೂ ತಾಪೀ ನದಿಗಳು ಮಾಡಿಕೊಂಡಿರುವ ವಿಶಾಲವಾದ ಕೊಳ್ಳಗಳು ನಮ್ಮ ದೇಶಕ್ಕೆ ಒಳ್ಳೇ ಉಪಯುಕ್ತವಾಗಿವೆ ಈ ಕೊಳ್ಳಗಳ ಮುಖಾಂತರವಾಗಿಯೇ ನೈಋತ್ಯ ಮಾನ್ಸೂನದ ಮಳೆಗಾಳಿಗಳು ಒಳಸೇರುವವು ಗುಜರಾಥ, ಮಧ್ಯಪ್ರದೇಶಗಳಿಗೆ ಮಳೆಯನ್ನು ಮುಟ್ಟಿಸುವವು

ದಕ್ಷಿಣ ಭಾಗದಲ್ಲಿ ಗೋದಾವರಿ, ಭೀಮಾ. ಕೃಷ್ಣಾ, ಘಟಪ್ರಭಾ, ಮಲಪ್ರಭಾ ನದಿಗಳಿರುವವು. ಇವುಗಳಲ್ಲಿ ಗೋದಾವರಿ ಹಾಗೂ ಕೃಷ್ಣಾನದಿಗಳು ಮಾತ್ರ ಸ್ವತಂತ್ರವಾಗಿ ಹರಿದು ಸಮುದ್ರವನ್ನು ಸೇರುವವು ಉಳಿದವುಗಳು ಕೃಷ್ಣಾನದಿಯ ಉಪನದಿಗಳು ಇವೆಲ್ಲ ನದಿಗಳು ಸಹ್ಯಾದ್ರಿಯ ಬೆಟ್ಟಗಳಲ್ಲಿ ಉಗಮ ಹೊಂದುವವು ಪೂರ್ವಕ್ಕೆ ಇಳುಕಲಾಗಿರುವ ತಪ್ಪಲಿನಲ್ಲಿ ಹರಿದು ಗೋದಾವರಿ ಹಾಗೂ ಕೃಷ್ಣಾನದಿಗಳು ಬಂಗಾಲದ ಉಪಸಾಗರಕ್ಕೆ ಕೂಡುವವು

ಇವೆಲ್ಲ ನದಿಗಳಲ್ಲಿ ಗೋದಾವರಿ ನದಿಯೇ ಹೆಚ್ಚು ಉದ್ದವಾಗಿರುವದು ಇದು ಸಹ್ಯಾದ್ರಿಯಲ್ಲಿ ತ್ರ್ಯಂಬಕೇಶ್ವರವೆಂಬಲ್ಲಿ ಉಗಮ ಹೊಂದುವದು ಮಹಾರಾಷ್ಟ್ರದಲ್ಲಿ ಮೊದಲು ಹರಿದು ಮುಂದೆ ಹೈದ್ರಾಬಾದ ರಾಜ್ಯವನ್ನು ಪ್ರವೇಶಿಸುವದು. ಒಂದು ಕಾಲದಲ್ಲಿ ಕನ್ನಡನಾಡು– 'ಕಾವೇರಿಯಿಂದ ಗೋದಾವರಿ ವರೆಗೂ' ಹಬ್ಬಿದಂತೆ ತಿಳಿಯುವದು ಆದರೆ ಇಂದಿನ ಕನ್ನಡ ನಾಡಿನ ಯಾವ ಭಾಗದಲ್ಲಿಯೂ ಈ ನದಿಯು ಹರಿಯುವದಿಲ್ಲ

ಕೃಷ್ಣಾನದಿಯು ಸಹ್ಯಾದ್ರಿಯಲ್ಲಿ ಮಹಾಬಳೇಶ್ವರದ ಹತ್ತಿರ ಉಗಮ ಹೊಂದುವದು ಮಹಾರಾಷ್ಟ್ರ, ಕರ್ನಾಟಕ ಹಾಗೂ ಹೈದರಾಬಾದ ಈ ಮೂರು ಭಾಗಗಳಲ್ಲಿಯೂ ಈ ನದಿಯು ಹರಿದಿರವದು. ಕೃಷ್ಣಾನದಿಯ ಕೊಳ್ಳವು ಕರ್ನಾಟಕದ ಬೆಲೆಯುಳ್ಳ ಪ್ರದೇಶಗಳಲ್ಲಿ ಒಂದಾಗಿರುವದು. ಭೀಮಾ, ಘಟಪ್ರಭಾ, ಮಲಪ್ರಭಾ ಈ ನದಿಗಳೇನು ತೀರ ಚಿಕ್ಕವುಗಳಲ್ಲ ಆದರೂ ಕೃಷ್ಣಾನದಿಯ ಉಪನದಿಗಳು

ಮುಂಬಯಿ ರಾಜ್ಯಕ್ಕೆ ಸೇರಿದ ಕರಾವಳಿಯ ಕಿರಿಯಗಲಾದ ಪಟ್ಟಿಯಲ್ಲಿ ಕೆಲವು ನದಿಗಳು ಹರಿಯುವವು. ಇವುಗಳಲ್ಲಿ ಶರಾವತಿಯೇ ಮುಖ್ಯವಾದುದು. ಈ ನದಿಯಿಂದ ಉಂಟಾದ ಗೆರಸಪ್ಪೆಯ ತಡಸಲು ಜಗತ್ಪ್ರಸಿದ್ಧವಾಗಿರುವದು ಇವುಗಳಲ್ಲದೆ ವೈತರಣೀ, ಕಾಳೀ, ಅಘನಾಶಿನಿ, ಮೊದಲಾದ ಬೇರೆ ನದಿಗಳೂ ಈ ಭಾಗದಲ್ಲಿ ಹರಿಯುವದುಂಟು, ಕರಾವಳಿಯ ಕಿರಿಯಗಲಾದ ಪ್ರದೇಶದಲ್ಲಿ ಇವು ಹರಿಯುವದರಿಂದ ಇವು ಚಿಕ್ಕ ನದಿಗಳು ಭೂಮಿಯು ಹೆಚ್ಚು ಇಳುಕಲಾಗಿರುವದರಿಂದ ಇವು ಕೂಡಲೆ ಪಶ್ಚಿಮದ ಅರಬೀ ಸಮುದ್ರವನ್ನು ಸೇರುವವು ಕೆಳಗಿನ ನೆಲವು ಕಲ್ಲುಬಂಡೆಯದಾಗಿರುವದರಿಂದ, ಈ ನದಿಗಳ ನೀರೂ ಭೂಮಿಯಲ್ಲಿ ಹೆಚ್ಚಾಗಿ ಇಂಗುವದಿಲ್ಲ. ಮುಖದ ಹತ್ತಿರ ಸಮುದ್ರದ

ಭರತಿಯ ನೀರು ಕೆಲವು ಅಂತರದ ವರೆಗೆ ಒಳಸೇರುವದು ಈ ಭಾಗಕ್ಕೆ 'ಖಾಡಿ' ಎನ್ನುವರು ಈ ಖಾಡಿಗಳಲ್ಲಿ ಮಾತ್ರ ನಾವೆಗಳು ಸಂಚರಿಸುವವು



ಆಕೃತಿ ೫ ಗೆರುಸಪ್ಪೆಯ ತಡಸಲು

ಈ ರಾಜ್ಯದ ತಪ್ಪಲಿನ ಭಾಗದಲ್ಲಿ ಹರಿಯುವ ನದಿಗಳೆಲ್ಲ ಇಳುಕಲಿನಲ್ಲಿ ಆಳವಾದ ಕೊಳ್ಳಗಳನ್ನು ಮಾಡಿಕೊಂಡು ಹರಿಯುವವು. ಮಳೆಗಾಲದಮುಹಾಪೂರದ ನೀರನ್ನೆಲ್ಲ ಸಮುದ್ರದಲ್ಲಿ ಚೆಲ್ಲಿ ಕೊಡುವವು ಬೇಸಿಗೆಯಲ್ಲಿ ಮುಖದ ಭಾಗವನ್ನು ಬಿಟ್ಟರೆ, ಇವುಗಳ ಪ್ರವಾಹವು ಬತ್ತಿಹೋಗುವದು ಇದರಿಂದ ಜಲಮಾರ್ಗಗಳೆಂದು ಈ ನದಿಗಳ ಉಪಯೋಗವಾಗುವದಿಲ್ಲ ಇವುಗಳಲ್ಲಿ ಕೆಲವು ನದಿಗಳಿಗೆ ಒಡ್ಡುಗಳನ್ನು ಹಾಕಿ ಕಾಲುವೆಗಳನ್ನು ತೆಗೆಯಬೇಕು, ಹಾಗು ವಿದ್ಯುತ್ತನ್ನು ಉತ್ಪಾದಿಸಬೇಕು—ಎಂದು ಸರಕಾರವು ಯೋಜನೆಗಳನ್ನು ಮಾಡಿರುತ್ತದೆ ಒಮ್ಮೊಮ್ಮೆ ಈ ನದಿಗಳಿಗೆ ಬರುವ ಮಹಾಪೂರಗಳಿಂದ ದಂಡೆಯ ಪ್ರದೇಶಗಳಿಗೆ ವಿಶೇಷವಾದ ಹಾನಿ ತಟ್ಟುವದುಂಟು, ಒಡ್ಡುಗಳನ್ನು ಹಾಕುವದರಿಂದ ಈ ಹಾನಿಯನ್ನು ತಪ್ಪಿಸಬಹುದು. ಈ ನದಿಗಳು ಹರಿಯುವ ಭಾಗಗಳಲ್ಲಿ ಆಗಾಗ್ಗೆ ಬೀಳುವ ಬರಗಳ ಭಯವು ಇದರಿಂದ ದೂರವಾಗಗುವದು ಈ ನದಿಗಳು ಬೆಟ್ಟಗಳಿಂದ ತಮ್ಮೊಡನೆ ತರುತ್ತಿರುವ ಸೂಸು ಮಣ್ಣಿನಿಂದ ಇವುಗಳ ಕೊಳ್ಳದ ಬಯಲು ಒಳ್ಳೇ ಬೆಳೆಯುಳ್ಳದ್ದಾಗಿರುವದು

ನಕಾಶದಲ್ಲಿ ಈ ನದಿಗಳನ್ನು ತೋರಿಸುವ ಗೆರೆಗಳನ್ನು ನೋಡಿರಿ ಅವು ನದಿಗಳ ಪ್ರವಾಹದ ದಿಕ್ಕುಗಳನ್ನು ತೋರಿಸುವವು ಈ ಗೆರೆಗಳು ಅಂಕುಡೊಂಕಾಗಿರುವವು ಹೀಗಿರಲು ಕಾರಣವೇನೆಂಬುದನ್ನು ನೀವು ಈಗಾಗಲೆ

## ಸಮತೂಕ ಆಹಾರ

ವಿದ್ಯಾರ್ಥಿಗಳೇ, ಮುಂಬಯಿ ರಾಜ್ಯದ ಪರಿಚಯವನ್ನು ನೀವು ಮಾಡಿ ಕೊಂಡಿರುವಿರಿ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ವಾಸಿಸುವ ಜನರ ಆಹಾರವು ಬೇರೆ ಬೇರೆಯಾಗಿರುವದೆಂಬುದುನ್ನು ನೀವು ತಿಳಿದುಕೊಂಡಿರುವಿರಿ. ಇಂದು

### ಸಮತೂಕ ಆಹಾರ




ಆಕೃತಿ ೩೨ ಸಮತೂಕ ಆಹಾರ.

ವೇಗವುಳ್ಳ ಸಾರಿಗೆ ಸಂಪರ್ಕಗಳ ಸಾಧನಗಳು ಬೇಕಾದಷ್ಟಿವೆ. ದೂರ ದೂರ ದೇಶಗಳಲ್ಲಿ ಬೆಳೆದ ಆಹಾರ ಪದಾರ್ಥಗಳನ್ನು ಇಂದಿನ ನಮ್ಮ ಊಟದಲ್ಲಿ ಸೇರಿಸಿ ಕೊಳ್ಳಬಹುದು ಆದರೆ ಸಾಮಾನ್ಯವಾಗಿ ಜನರು ತಾವು ವಾಸಿಸುವ ಭೂಮಿಯಲ್ಲಿ ಬೆಳೆಯುವ ಕಾಳು-ಕಡಿಗಳನ್ನೇ ತಮ್ಮ ಆಹಾರಕ್ಕಾಗಿ ಉಪಯೋಗಿಸುವದುಂಟು. ನಮ್ಮ ಆಹಾರವು ಬೆಳೆಗಳನ್ನವಲಂಬಿಸಿದೆ. ಬೆಳೆಗಳು ಭೂಮಿ, ಮಳೆ, ಉಷ್ಣತೆ ಮೊದಲಾದ ಭೂಗೋಲದ ಸಂಗತಿಗಳನ್ನವಲಂಬಿಸಿರುವವು. ಎಲ್ಲ ಪ್ರಾಣಿಗಳಂತೆ ನಮಗೂ ಹವೆ, ಅನ್ನ, ನೀರು ಜೀವನಕ್ಕೆ ಮುಖ್ಯವಾದ ಸಂಗತಿಗಳು.

ದಿನಾಲೂ ನಾವು ಬೇರೆ ಬೇರೆ ಆಹಾರ ತೆಗೆದುಕೊಳ್ಳುತ್ತಿದ್ದರೂ, ಅದರಿಂದ ನಮಗೆ ಯಾವ ಯಾವ ಪ್ರಯೋಜನಗಳಾಗುತ್ತವೆ ಎಂಬ ಬಗ್ಗೆ

ವಿಚಾರಿಸುವದಿಲ್ಲ. ಆದ್ದರಿಂದ ಮೊದಲು ಆಹಾರವು ಮುಖ್ಯವಾಗಿ ಏತಕ್ಕಾಗಿ ಬೇಕು ಎಂಬುದನ್ನು ನೋಡೋಣ.

೧ ಚಟುವಟಿಕೆಗೆ ಬೇಕಾಗುವ ಚೈತನ್ಯವನ್ನು ಕೊಡುವದು

೨. ದೇಹದಲ್ಲಿ ಉಷ್ಣತೆ ಉತ್ಪನ್ನಮಾಡಿ ಅದನ್ನು ಬೆಚ್ಚಗಿಡುವದು.

೩ ದೇಹದ ಬೆಳವಣಿಗೆಯನ್ನು ಮಾಡುವದು

೪ ದೇಹದಲ್ಲಿಯ ಸವಕಳಿಯನ್ನು ತುಂಬುವದು.

ಇವೇ ಆಹಾರದ ಮುಖ್ಯ ಕಾರ್ಯಗಳು

ಆಹಾರ ಸೇವಿಸದಿದ್ದರೆ ಕೆಲಸಮಾಡಲು ಶಕ್ತಿಬರುವದಿಲ್ಲ ಮತ್ತು ದೇಹದ ಉಷ್ಣತಾಮಾನವಾದರೂ ಕಡಿಮೆಯಾಗುತ್ತದೆ ಅದರಂತೆ ಉಪವಾಸದಿಂದ ದೇಹದ ತೂಕ ಎತ್ತರ ಹೆಚ್ಚಾಗುವದಿಲ್ಲ, ಮತ್ತು ಗಾಯಗಳೂ ಮಾಯಲಾರವು.

ಬೇರೆ ಬೇರೆ ಆಹಾರಪದಾರ್ಥಗಳು ಬೇರೆ ಬೇರೆ ಕೆಲಸಕ್ಕೆ ಉಪಯೋಗವಾಗುತ್ತವೆ ಉದಾಹರಣಾರ್ಥವಾಗಿ ನಾವು ಬಹಳ ದಣಿದಾಗ ಚಹ ಇಲ್ಲವೆ ಇತರ ಸಿಹಿಯಾದ ಪೇಯ ಇಲ್ಲವೆ ಪದಾರ್ಥ ಸೇವಿಸುತ್ತೇವೆ ಏಕೆಂದರೆ ಸಿಹಿಪದಾರ್ಥವು ಚೈತನ್ಯವನ್ನು ಕೊಟ್ಟು ದಣಿವು ಹೋಗಲಾಡಿಸುತ್ತದೆ. ಇಂಥ ಸಿಹಿ ಪದಾರ್ಥಗಳಿಗೆ ಸಾಮಾನ್ಯವಾಗಿ " ಸಕ್ಕರೆ " ಎಂದು ಕರೆಯುತ್ತೇವೆ ಅದರಂತೆ ಹಿಟ್ಟಿನ ರುಚಿ ಇರುವ ಎಲ್ಲ ಪದಾರ್ಥಗಳೂ ಚೈತನ್ಯ ಕೊಡುತ್ತವೆ ಮತ್ತು ಉಷ್ಣತೆ ಹುಟ್ಟಿಸಲು ಸಹಾಯವಾಗುತ್ತವೆ ಇಂಥ ಪದಾರ್ಥಗಳಿಗೆ " ಪಿಷ್ಟ " ಎಂದು ಕರೆಯುತ್ತೇವೆ

ತೃಣಧಾನ್ಯಗಳಾದ ಅಕ್ಕಿ, ಗೋದಿ, ಜೋಳ, ರಾಗಿ, ಸಜ್ಜೆ, ಮುಂತಾದವುಗಳಲ್ಲಿ ಮತ್ತು ಬಟಾಟೆ, ಗೆಣಸಿನಂಥ ಗಡ್ಡೆಗಳಲ್ಲಿ ಪಿಷ್ಟವು ಇರುತ್ತದೆ

ಜೇನುತುಪ್ಪ, ಬೆಲ್ಲ, ಸಕ್ಕರೆ, ಸಿಹಿ ಹಣ್ಣುಗಳು ಇವುಗಳಲ್ಲಿ ಸಕ್ಕರೆ ಇರುತ್ತದೆ

ಬೆಳೆಯುವ ಸಣ್ಣ ಮಕ್ಕಳಿಗೆ ಹಾಲು ಕೊಡುತ್ತಾರೆ ಆದ್ದರಿಂದ ಮಕ್ಕಳ ಎತ್ತರ, ತೂಕ ಹೆಚ್ಚಾಗಿ ಬೇಗನೆ ಬೆಳೆಯುತ್ತವೆ ಅದರಂತೆ ದೊಡ್ಡವರು ಬೆಳೆಯಲು, ದ್ವಿದಲ ಧಾನ್ಯಗಳಾದ ಕಡಲೆ, ಉದ್ದು, ಹೆಸರು, ತೊಗರಿ, ಅಲಸಂದಿ ಮುಂತಾದವುಗಳನ್ನು ತಿನ್ನುತ್ತಾರೆ ಮಾಂಸಾಹಾರಿಗಳು ತತ್ತಿ, ಮಾಂಸ, ಮೀನು ಇವುಗಳನ್ನು ತಿನ್ನುತ್ತಾರೆ. ಈ ಎಲ್ಲ ಪದಾರ್ಥಗಳಿಗೆ

"ಸಸಾರ ಜನಕಗಳು" (ಇಲ್ಲವೆ ಪ್ರೋಟೀನ್) ಎನ್ನುತ್ತಾರೆ. ಇವೆಲ್ಲವೂ ಬೆಳವಣಿಗೆಗೆ ಸಹಾಯವಾಗುತ್ತವೆ. ಮತ್ತು ಗಾಯಗಳನ್ನು ತುಂಬಲು ಉಪಯೋಗವಾಗುತ್ತವೆ.

ಹೆಚ್ಚು ದುಡಿಯುವ ಹಳ್ಳಿಯ ಜನರು ರೊಟ್ಟಿಯೊಡನೆ ಎಣ್ಣೆಯನ್ನು ಹೆಚ್ಚಾಗಿ ತಿನ್ನುತ್ತಾರೆ ಎಣ್ಣೆಗಳನ್ನು, ಸೇಂಗಾ, ಕುಸುಬಿ, ತೆಂಗು, ಎಳ್ಳು ಮುಂತಾದವುಗಳಿಂದ ತೆಗೆಯುತ್ತಾರೆ ಕೊಂಕಣದಲ್ಲಿಯ ಜನರು ಹೆಚ್ಚಾಗಿ ಕೊಬ್ಬರಿ ಎಣ್ಣೆಯನ್ನು ಸೇವಿಸುತ್ತಾರೆ ಇನ್ನು ಕೆಲವರು ತುಪ್ಪವನ್ನೂ ಸೇವಿಸುತ್ತಾರೆ ಈ ಎಲ್ಲ ಎಣ್ಣೆಯಂಥ ಪದಾರ್ಥಗಳಿಗೆ "ಸ್ನಿಗ್ಧ" (ಇಲ್ಲವೆ ಕೊಬ್ಬು) ಪದಾರ್ಥಗಳೆನ್ನುತ್ತೇವೆ ಇವುಗಳಿಂದ ಸಕ್ಕರೆ, ಪಿಷ್ಟಗಳಿಗಿಂತಲೂ ಹೆಚ್ಚು ಉಷ್ಣತೆ ಉತ್ಪನ್ನ ಮಾಡಿಕೊಳ್ಳುವದಕ್ಕೋಸ್ಕರ, ದೀವಳಿಗೆ, ನವರಾತ್ರಿಯಂಥ ಅನೇಕ ಹಬ್ಬಗಳನ್ನು ಮಾಡಿ ಎಣ್ಣೆಯುಕ್ತ ಅನೇಕ ತಿನಸುಗಳನ್ನು ಅಡಿಗೆಯಲ್ಲಿ ತಯಾರಿಸಿ ತಿನ್ನುತ್ತೇವೆ ಕಠಿಣ ಶ್ರಮ ವಹಿಸಬೇಕಾದಂಥ ರೈತರು, ಕಮ್ಮಾರರು ಮುಂತಾದವರು ಇದೇ ಕಾರಣದಿಂದ ಹೆಚ್ಚು ಎಣ್ಣೆಯನ್ನು ತಿನ್ನುತ್ತಾರೆ

ಪಿಷ್ಟ ಇಲ್ಲವೆ ಸಕ್ಕರೆ ಸಸಾರಜನಕ ಮತ್ತು ಕೊಬ್ಬು ಈ ಎಲ್ಲ ಆಹಾರದ ಘಟಕಗಳನ್ನು ಸೇವಿಸಿದರೂ ದೇಹದ ಬೆಳವಣಿಗೆ ಪರಿಪೂರ್ಣವಾಗಲಾರದು ದೇಹದ ಸರ್ವಾಂಗೀಣ ಬೆಳವಣಿಗೆಯಾಗಿ ಅದಕ್ಕೆ ರೋಗಪ್ರತೀಕಾರಕ ಶಕ್ತಿ ಬರಬೇಕಾದರೆ ಇನ್ನೊಂದು ಘಟಕವನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕು. ಅದೆಂದರೆ "ಜೀವನಸತ್ವಗಳು" ಜೀವನಸತ್ವಗಳಲ್ಲಿ ಅ, ಬ, ಕ, ಡ, ಇ ಹೀಗೆ ಅನೇಕ ಪ್ರಕಾರಗಳಿವೆ ಪ್ರತಿಯೊಂದು ಜೀವನಸತ್ವದಿಂದ ದೇಹದ ಕೆಲಭಾಗದ ಬೆಳವಣಿಗೆಯು ಆಗುತ್ತದೆ. ಒಂದೊಂದು ಜೀವನಸತ್ವದ ಅಭಾವದಿಂದ ಒಂದೊಂದು ವಿಶಿಷ್ಟ ರೋಗವು ಉತ್ಪನ್ನವಾಗುತ್ತದೆ ರೋಗಪ್ರತೀಕಾರಕ ಶಕ್ತಿಯನ್ನು ಪಡೆಯಬೇಕಾದರೆ, ಜೀವನಸತ್ವವಿರುವ ಆಹಾರವನ್ನು ಸೇವಿಸಬೇಕಾಗುತ್ತದೆ ಸಾಮಾನ್ಯವಾಗಿ ತಾಜಾಕಾಯಿಪಲ್ಲೆ, ಹಣ್ಣುಗಳು, ಹಾಲು, ಮೊಳಕೆ ಬಂದ ಧಾನ್ಯಗಳು ಇವುಗಳಲ್ಲಿ ಜೀವನಸತ್ವವು ದೊರೆಯುತ್ತದೆ.

ಇಲ್ಲಿಯ ವರೆಗೆ ಬೇರೆ ಬೇರೆ ಆಹಾರದ ಘಟಕಗಳ ಮಹತ್ವವನ್ನು ವಿಚಾರಿಸಿದ್ದಾಯಿತು. ಇವೆಲ್ಲ ಘಟಕಗಳನ್ನೂ ಯೋಗ್ಯ ಪ್ರಮಾಣದಲ್ಲಿ ವಯಸ್ಸು

ಮತ್ತು ಉದ್ಯೋಗದ ಮೇಲೆ ಅವಲಂಬಿಸಿ ತೆಗೆದುಕೊಳ್ಳಬೇಕು ಅಂದರೆ ಬೆಳೆಯುವ ಮಕ್ಕಳಿಗೆ ಹೆಚ್ಚು ಸಸಾರಜನಕ ಪದಾರ್ಥ, ಶ್ರಮಜೀವಿಗಳಿಗೆ ಹೆಚ್ಚು ಪಿಷ್ಟ ಮತ್ತು ಕೊಬ್ಬು ಬೇಕಾಗುತ್ತವೆ ಅದರಂತೆ ವಿದ್ಯಾರ್ಥಿಗಳಿಗೆ ವಯಸ್ಸಾದವರಿಗೆ, ರೋಗಿಗಳಿಗೆ ಯೋಗ್ಯ ಪ್ರಮಾಣದ ಆಹಾರವನ್ನು ಕೊಡ ಬೇಕಾಗುತ್ತದೆ. ಇಂಥ ಎಲ್ಲ ಆಹಾರಾಂಶಗಳನ್ನೊಳಗೊಂಡ ಪ್ರಮಾಣ ಯುಕ್ತವಾದ ಆಹಾರಕ್ಕೆ "ಸಮತೂಕ ಆಹಾರ" ಎನ್ನುತ್ತಾರೆ ಪ್ರತಿ ಯೊಬ್ಬರೂ ಸಮತೂಕ ಆಹಾರ ಸೇವಿಸಲು ಪ್ರಯತ್ನಿಸಬೇಕು ಇದರಿಂದ ನಾವು ಸದೃಢರಾಗಿ, ರೋಗಪ್ರತೀಕಾರಕ ಶಕ್ತಿಯುಳ್ಳವರಾಗುತ್ತೇವೆ

ಪ್ರಕರಣ ೧೪

# ಕೆಲವು ಮಹತ್ವದ ಆಹಾರಪದಾರ್ಥಗಳು

## ೧ ಮೊಳಿಕೆ ಬಂದ ಧಾನ್ಯಗಳು

ನಾವು, ಅಡಿಗೆಯಲ್ಲಿ ಎಷ್ಟೋ ಸಲ ಬೇರೆ ಬೇರೆ ಕಾಳುಗಳನ್ನು ನೆನೆ– ಹಾಕಿ ಮೊಳಿಕೆಯೊಡಿಸಿ 'ಉಸುಳಿ' ತಯಾರಿಸುವದನ್ನು ನೋಡಿದ್ದೇವೆ. ಸಾಮಾನ್ಯವಾಗಿ ಕಡಲೆ, ಬಟಗಡಲೆ, ಹೆಸರು, ಮಡಿಕೆ, ಅಲಸಂದಿ ಮುಂತಾ ದವುಗಳನ್ನು ನೀರಿನಲ್ಲಿ ಒಂದು ಇಲ್ಲವೆ ಎರಡು ದಿವಸ ನೆನೆ ಹಾಕಿ ಮೊಳಿಕೆ ಒಡೆಯುವಂತ ಮಾಡುತ್ತಾರೆ. ಆಮೇಲೆ ಉಳಿದ ಪಲ್ಲೆಗಳಂತೆ ಅದನ್ನೂ ಬೇಯಿಸುತ್ತಾರೆ. ಮತ್ತು ಬೇಯಿಸುವಾಗ ಪಾತ್ರೆಯ ಬಾಯಿ ಮುಚ್ಚುತ್ತಾರೆ. ಈ ಮೊಳಿಕೆಯೊಡೆದ ಕಾಳುಗಳಲ್ಲಿ ಇಲ್ಲವೆ ಧಾನ್ಯ ಗಳಲ್ಲಿ ಮುಖ್ಯವಾಗಿ "ಕ" ಜೀವನಸತ್ವವು ಇರುತ್ತದೆ. ಅಲ್ಲದೆ ಅಲ್ಪ ಪ್ರಮಾಣದಲ್ಲಿ "ಬ" ಮತ್ತು "ಇ" ಜೀವನ ಸತ್ವಗಳೂ ಇರುತ್ತವೆ ಮೊಳಿಕೆ ಬಂದ ಕಾಳುಗಳನ್ನು ಬಹಳ ಬೇಯಿಸಬಾರದು. ಹಾಗೆ ಮಾಡಿ



ಆಕೃತಿ ೩೩. ಮೊಳಿಕೆ ಬಂದ ಧಾನ್ಯಗಳು

ನಿಮಗೆ ನಿಜವಾದ ವಿಷಮ ಹವೆಯನ್ನು ನೋಡಬೇಕಾಗಿದೆಯೇನು? ಹಾಗಾದರೆ ಉತ್ತರದ ಬಯಲು ಸೀಮೆಯಾದ ಗುಜರಾಥಕ್ಕ ನಡೆಯಿರಿ ಇದಾದರೂ ಸಮುದ್ರದಿಂದ ದೂರವಿರುವ ಒಳನಾಡು ಮೇಲಾಗಿ ಇಲ್ಲಿಯ ನೆಲವು ಸಮಭೂಮಿಯಾಗಿದೆ, ಇಲ್ಲವೆ ಉಸುಕುಳ್ಳ ತಗ್ಗು ಪ್ರದೇಶವಾಗಿದೆ. ಆದುದರಿಂದ ಗುಜರಾಥದ ಹವೆಯು ನಿಜವಾಗಿ ವಿಷಮವಾಗಿದೆ ಚಳಿಗಾಲದಲ್ಲಿ ಮೈಕೊರೆಯುವ ಚಳಿ ಬೇಸಿಗೆಯಲ್ಲಿ ಮೈಸುಡುವ ಬಿಸಿಲು- ಹಗಲು ರಾತ್ರಿಗಳ ಹವಾಮಾನದ ಅಂತರವೂ ಇದೇ ರೀತಿಯಾಗಿ ಇರುವದು ಗುಜರಾಥದಲ್ಲಿ ಪ್ರಸಿದ್ಧ ಪಟ್ಟಣವಾದ ಅಹಮ್ಮದಾಬಾದವು ಈ ಬಗೆಯ ಹವಾಮಾನಕ್ಕೆ ಒಳ್ಳೇ ಮಾದರಿಯಾಗಿದೆ. ಕೊಂಕಣಪಟ್ಟಿಯು ಬಯಲು ಪ್ರದೇಶವಾದರೂ, ಸಮುದ್ರದ ಸಾಮೀಪ್ಯದಿಂದ, ಗುಜರಾಥದಷ್ಟು ಅಲ್ಲಿಯ ಹವೆಯು ಉಷ್ಣವಾಗಿರುವದಿಲ್ಲ.

ಬೇರೆ ಬೇರೆ ಭಾಗಗಳ ಹವಾಮಾನವನ್ನು ಹೇಳುವಾಗ್ಗೆ ಒಂದು ಹೆಚ್ಚು ಉಷ್ಣ, ಮತ್ತೊಂದು ಕಡಿಮೆ ಉಷ್ಣವೆಂದು ಇದುವರೆಗೆ ಸಾಮಾನ್ಯವಾಗಿ ಹೇಳುತ್ತ ಬಂದೆವು. ಆದರೆ ಹವೆಯ ಹೆಚ್ಚು ಕಡಿಮೆ ಉಷ್ಣತೆಯನ್ನು ಹೇಗೆ ಕಂಡುಹಿಡಿಯುವರು, ಅದನ್ನು ಹೇಗೆ ಅಳೆಯುವರು, ಎಂಬುದನ್ನು ನೀವು ಬಲ್ಲಿರಾ? ಜ್ವರ ಬಂದಾಗ್ಗೆ, ಡಾಕ್ಟರರು ಒಂದು ಕಾಜಿನ ಕೊಳವೆಯಂಥ ಸಾಧನದಿಂದ ಇಂತಿಷ್ಟು ಜ್ವರವಿದೆ, ಜ್ವರ ಏರಿದೆ, ಇಳಿದಿದೆ —ಎಂದು ಹೇಳುವದನ್ನು ನೀವು ನೋಡಿರುವಿರಿ ಇದಕ್ಕಿಂತಲೂ ದೊಡ್ಡದಾದ ಇಂಥದೇ ಒಂದು ಸಾಧನದಿಂದ ಹವೆಯಲ್ಲಿಯ ಉಷ್ಣತೆಯನ್ನು ಅಳೆಯುವರು ಇದಕ್ಕೆ 'ಥರ್ಮಾಮೀಟರ'—'ಉಷ್ಣತಾಮಾಪಕ'ವೆಂದು ಕರೆಯುವರು ಹವೆಯೊಳಗಿನ ಉಷ್ಣತೆಯಿಂದ ಇದರೊಳಗಿನ ಪಾರಜವು ಕಾಯ್ದು ಪ್ರಸರಣವಾಗಿ ಸಣ್ಣದೊಂದು ಕೊಳವೆಯಲ್ಲಿ ಮೇಲಕ್ಕೆ ಏರುವದು. ಪಾರಜದ ಏರಿಳಿಕೆಯಿಂದಲೆ, ಉಷ್ಣತೆಯ ಏರಿಳಿಕೆಗಳನ್ನು ಗೊತ್ತುಪಡಿಸುವರು. ಈ ಏರಿಳಿತಗಳು ಅಂಶಗಳ ರೂಪಗಳಲ್ಲಿರುವವು ೭೦ ಅಂಶಗಳ



ಆಕೃತಿ ೬
ಉಷ್ಣತಾಮಾಪಕ ಯಂತ್ರ

ಕೆಳಗಿನ ಉಷ್ಣತೆಗೆ ತಂಪು ಹವೆಯೆನ್ನಬಹುದು ೭೦ ರಿಂದ ೯೦ ಅಂಶಗಳ ವರೆಗೆ ಉಷ್ಣಹವೆ. ಅದಕ್ಕೂ ಹೆಚ್ಚಿಗಿದ್ದರೆ ಬಹಳೇ ಉಷ್ಣಹವೆಯೆನ್ನುವರು

## ಗಾಳಿಗಳು

ಮುಂಬಯಿ ರಾಜ್ಯದಲ್ಲಿ ಮುಖ್ಯವಾಗಿ ಬೀಸುವ ಗಾಳಿಗಳೆಂದರೆ ಮನ್ಸೂನ ಗಾಳಿಗಳು. ಇವುಗಳಿಗೆ 'ಹಂಗಾಮಿ' ಗಳೆಂತಲೂ ಕರೆಯುವರು. ಏಕೆಂದರೆ ಈ ಗಾಳಿಗಳು ಕೆಲವೊಂದು ತಿಂಗಳುಗಳಲ್ಲಿ ಮಾತ್ರ ಬೀಸುವವು. ಮುಂಬಯಿ ರಾಜ್ಯಕ್ಕೆ ಮಾತ್ರವಲ್ಲ, ಒಟ್ಟು ಭಾರತಕ್ಕೆಲ್ಲ, ಈ ಗಾಳಿಗಳೇ ಮಳೆಯನ್ನು ತರುವವು, ಒದಗಿಸುವವು ಈ ಮನ್ಸೂನ ಗಾಳಿಗಳು ಎರಡು ಪ್ರಕಾರದವುಗಳು ೧) ನೈಋತ್ಯ ಹಾಗೂ ೨) ಈಶಾನ್ಯ ಗಾಳಿಗಳು. ನೈಋತ್ಯ ಮನ್ಸೂನ ಗಾಳಿಗಳೇ ನಮಗೆ ಮುಖ್ಯವಾದವುಗಳು ಈಶಾನ್ಯ ಮನ್ಸೂನ ಗಾಳಿಗಳಿಂದ ನಮ್ಮ ಮುಂಬಯಿ ರಾಜ್ಯಕ್ಕೆ ಪ್ರಯೋಜನವಿಲ್ಲವೆಂತಲೇ ಹೇಳ ಬಹುದು ಗಾಳಿಗಳ ದಿಕ್ಕು—ವೇಗಗಳನ್ನು ಹೇಗೆ ಕಂಡುಹಿಡಿಯುವರೆಂಬು ದನ್ನು ನೀವು ಮೇಲಿನ ವರ್ಗದಲ್ಲಿ ತಿಳಿದುಕೊಳ್ಳುವಿರಂತೆ. ಆರ್ದ್ರತೆಯಿಂದ ಕೂಡಿದ ಮನ್ಸೂನ ಗಾಳಿಗಳು ಘಟ್ಟಗಳ ಪಶ್ಚಿಮದ ಇಳುಕಲಿನಲ್ಲಿ ಮಳೆ ಗರೆಯುವವು.' ಪೂರ್ವದ ತಪ್ಪಲಿಗೆ ಮುಟ್ಟುವದರೊಳಗಾಗಿ ಅವು ತಮ್ಮ ಆರ್ದ್ರತೆಯನ್ನೆಲ್ಲ ಕಳೆದುಕೊಂಡುಬಿಟ್ಟಿರುವವು. ಒಣಗಾಳಿಗಳಾಗಿ ಬೀಸು ವವು.

## ಮಳೆ

ಈ ರಾಜ್ಯದ ಹವೆ ಗಾಳಿಗಳ ಬಗ್ಗೆ ನೀವು ಪರಿಚಯ ಮಾಡಿಕೊಂಡಿರು ವಿರಿ ಹೆಚ್ಚು ಕಡಿಮೆ ಮಳೆಯಾಗುವ ಈ ರಾಜ್ಯದ ಬೇರೆ ಬೇರೆ ಭಾಗಗಳು ಯಾವು? ಮಳೆಯ ಪ್ರಮಾಣದಲ್ಲಿ ಹೀಗೇಕೆ ಹೆಚ್ಚು ಕಡಿಮೆಯಾಗುವದು? ಎಂಬುದನ್ನು ಇಲ್ಲಿ ತಿಳಿದುಕೊಳ್ಳೋಣ.

ಹವೆಯ ಉಷ್ಣತೆಯನ್ನು ಅಳೆಯುವಂತೆ, ಮಳೆಯನ್ನೂ ಅಳೆಯುವರು ಇದಕ್ಕೊಂದು ಬೇರೆ ಸಾಧನವಿದೆ. ಇದಕ್ಕೆ 'ರೇನಗೇಜ' ಎಂದರೆ 'ಪರ್ಜನ್ಯ-ಮಾಪಕ' ವೆಂಬ ಹೆಸರು ಗೊತ್ತುಪಡಿಸಿದ ಅಳತೆಯ ಒಂದು ಲಾಳಿಕೆಯಲ್ಲಿ ಮೇಲಿನಿಂದ ಬೀಳುವ ಮಳೆಯ ನೀರನ್ನು ಒಂದು ಪಾತ್ರೆಯಲ್ಲಿ ಸಂಗ್ರಹಿಸುವರು ಒಂದು ಪ್ರಮಾಣದ ಗಾಜಿನ ಪಾತ್ರೆಯಿಂದ ಈ

ನೀರನ್ನು ಅಳೆಯುವರು. ಒಂದು ಇಂಚಿನಷ್ಟು ನೀರು ನಿಂತರೆ, ಒಂದು ಇಂಚು ಮಳೆಯಾಗಿದೆಯೆಂದು ಹೇಳುವದುಂಟು ಎತ್ತರವಾದ ಸ್ಥಳದಲ್ಲಿ



ಆಕೃತಿ ೩ ಪರ್ಜನ್ಯಮಾಪಕ (ಮಳೆಯನ್ನು ಅಳೆಯುವದು)

ಒಂದು ಚಿಕ್ಕ ಕಟಾಂಜನದೊಳಗೆ ಇಂಥ ಸಾಧನಗಳನ್ನಿಡುವರು ನಿಮ್ಮೂರಿನ ಅಂಚೆ ಕಚೇರಿಯ ಇಲ್ಲವೆ ದವಾಖಾನೆಯ ಆವಾರದಲ್ಲಿ ಇವುಗಳನ್ನು ನೀವು ನೋಡಬಹುದು ಒಂದು ವರುಷದಲ್ಲಿ ಒಟ್ಟು ೧೦ ಇಂಚಿಗಿಂತಲೂ ಕಡಿಮೆ ಮಳೆಯಾದರೆ, ಅದು ತೀರ ಕಡಿಮೆ ಮಳೆ ಆ ಪ್ರದೇಶವು ಅರ್ಧ ಮರು ಭೂಮಿಯೆಂದೇ ಹೇಳಬಹುದು ೨೦ ರಿಂದ ೪೦ ಇಂಚುಗಳ ಮಳೆ, ಸಾಕಷ್ಟು ಮಳೆಯೆನ್ನಬೇಕು ೮೦ ಇಂಚುಗಳಿಗಿಂತಲೂ ಹೆಚ್ಚಾಗುವ ಮಳೆ ವಿಪುಲ ವಾದ–ಅತಿಶಯವಾದ ಮಳೆಯೆನಿಸಿಕೊಳ್ಳುವದು

ನಮ್ಮ ದೇಶದಲ್ಲಿ ಈ ಮಳೆಗಾಳಿಗಳು ಜೂನ ಮೊದಲನೆ ವಾರದಿಂದ ಬೀಸಲುಪ್ರಾರಂಭಿಸುವವು ಸುಮಾರು ಜೂನ ೬ನೇ ದಿನಾಂಕಕ್ಕೆ ಈ ಗಾಳಿಗಳು ಮುಂಬಯಿಗೆ ಮುಟ್ಟುವವು. ಅಂದು ಮುಂಬಯಿಯಲ್ಲಿ ಭಾರೀ ಮಳೆ ನಮ್ಮ ಪಂಚಾಂಗದಲ್ಲಿ ಇದಕ್ಕೆ 'ಮೃಗ ಪ್ರವೇಶ' ವೆನ್ನುವರು. ಬೇಸಿಗೆಯ ಸೆಕೆಯು ಅಂದೇ ಮಾಯವಾಗಿ, ಆರ್ದ್ರತೆಯಿಂದ ಹವೆಯು ತಂಪಾಗುವದು ಈ ಹವೆಯ ಆಕಸ್ಮಿಕ ವ್ಯತ್ಯಾಸವು ಶರೀರಕ್ಕೆ ಬಾಧಿಸಬಾರದೆಂದು ಹಿರಿಯರು ಇಂಗು ಬೆಲ್ಲವನ್ನು ತಿನ್ನಲು ಕೊಡುವರು ನಿಮಗೆ ಇದು ನೆನಪಿನಲ್ಲಿರುವದಲ್ಲವೇ? ಜೂನ ಮೊದಲನೆಯ ವಾರದಿಂದ ಸಪ್ಟಂಬರದ ಕೊನೆಯ ವಾರದ ವರೆಗೆ ಈ ನೈಋತ್ಯ ಮನ್ಸೂನ ಗಾಳಿಗಳು ಈ ದೇಶದಲ್ಲಿ ಬೀಸುವವು. ಹಿಂದಿನಿಂದ

ಬರುವ ಈಶಾನ್ಯ ಮನ್ಸೂನಿನ ಮಳೆಗಳಿಗೆ ಹಿಂಗಾರಿ ಮಳೆಯೆನ್ನುವರು. ಈಶಾನ್ಯ ಮಳೆಗಾಳಿಗಳಿಂದ ನಮ್ಮ ರಾಜ್ಯಕ್ಕೆ ತೀರ ಕಡಿಮೆ ಪ್ರಯೋಜನ ವುಂಟು.

ನೈಋತ್ಯ ಮನ್ಸೂನ ಗಾಳಿಗಳು ಮೊದಲು ಕೊಂಕಣದ ಮೇಲೆ ಬೀಸುವವು. ಕೊಂಕಣದ ಬಯಲಿನಲ್ಲಿ ೬೦-೭೦ ಇಂಚುಗಳಷ್ಟು ಮಳೆ ಯಾಗುವದು. ಮುಂದೆ ಪಶ್ಚಿಮ ಘಟ್ಟಗಳು ಈ ಮಳೆಗಾಳಿಗಳನ್ನು ತಡೆಯು ವವು. ಘಟ್ಟಗಳ ಮೇಲೆ ಅತಿಶಯವಾದ ಮಳೆಯಾಗುವದು ೧೫೦ ರಿಂದ ಕೆಲವೆಡೆ ೨೦೦ ಇಂಚುಗಳ ವರೆಗೆ ಮಳೆ ಬೀಳುವದು ಪೂರ್ವದ ತಪ್ಪಲಿ ನಲ್ಲಿ ಮಳೆಯ ಪ್ರಮಾಣವು ಕಡಿಮೆಯಾಗುತ್ತ ಹೋಗುವದು ತಾಪೀ ಹಾಗೂ ನರ್ಮದಾ ಕೊಳ್ಳಗಳ ಮುಖಾಂತರವಾಗಿ ಒಳಸೇರಿದ ಮನ್ಸೂನ ಗಾಳಿಗಳು ಗುಜರಾಥ, ಖಾನದೇಶಗಳಿಗೆ ೪೦-೫೦ ಇಂಚುಗಳಷ್ಟು ಮಳೆ ಕೊಡುವವು. ಮಲೆನಾಡ ಸೆರಗುಗಳಾದ ಬೆಳಗಾವ, ಧಾರವಾಡ ಜಿಲ್ಹೆಗಳಲ್ಲಿ ೪೦ ಇಂಚು ಗಳಷ್ಟು ಮಳೆ, ತಪ್ಪಲಿನ ನಡುವಿನ ಭಾಗಗಳಾದ ವಿಜಾಪೂರ, ಸೊಲ್ಲಾಪೂರ ಜಿಲ್ಲೆಗಳಲ್ಲಿ ೨೦ ಇಂಚುಗಳಷ್ಟು ಮಾತ್ರ ಮಳಯಾಗುವದು ಅನಿಶ್ಚಿತ ವಾದ ಈ ಮಳೆಗಳು ಸಕಾಲಕ್ಕೆ ಆಗದೆ, ಇಲ್ಲವೆ ತೀರಾ ಆಗದೆ ಹೋದರೆ ಈ ತಪ್ಪಲಿನ ಪ್ರದೇಶದಲ್ಲಿ ಆಗಾಗ್ಗೆ ಬರ ಬೀಳುವದುಂಟು.

## ಅಭ್ಯಸನಗಳು

೧ 'ಮುಂಬಯಿ ರಾಜ್ಯದಲ್ಲಿ ಭೂರಚನೆಯ ಎಲ್ಲ ಪ್ರಕಾರಗಳೂ ಕಂಡುಬರುವವು' ಈ ಮಾತನ್ನು ಉದಾಹರಣೆಗಳಿಂದ ತಿಳಿಸಿ ಹೇಳಿರಿ

೨ ಸಮುದ್ರ ತೀರದ ಹವೆಯು ಹೇಗಿರುವದು? ಏಕೆ?

೩. ಕೆಳಗಿನ ಸಂಗತಿಗಳು ಹೀಗಿರಲು ಕಾರಣವೇನು?

ಅ) ಗಿರಿಶಿಖರಗಳಿಗೆ ಜನರು ಬೇಸಿಗೆಯಲ್ಲಿ ಮಾತ್ರ ಹೋಗುವರು?

ಬ) ಮಲೆನಾಡಿನ ಜನರ ಜೀವನವು ಕಷ್ಟಕರವಾದುದು

ಕ) ಬೆಳುವಲ ನಾಡಿನ ಬೇಸಿಗೆಯು ಪ್ರಖರವಾದುದು

೪ ನಮ್ಮ ರಾಜ್ಯಕ್ಕೆ ಮಳೆ ತರುವ ಗಾಳಿಗಳಿಗೆ ಏನೆಂದು ಕರೆಯುವರು? ಏಕೆ

೫ ಮಳೆಯನ್ನು ಹೇಗೆ ಅಳೆಯುವರು?

೬ 'ಮೃಗ ಪ್ರವೇಶ' ವೆಂದರೇನು? ಎಂದು ಆಗುವದು?

## ಪ್ರಕರಣ ೫

# ಭೂಮಿಯ ಪ್ರಕಾರಗಳು

ಹವೆ, ಮಳೆಗಳಂತೆಯು, ಭೂಮಿಯೂ ಬೆಳೆಗಳಿಗೆ ಮಹತ್ವವಾದುದಲ್ಲವೆ? ಬೇರೆ ಬೇರೆ ಪ್ರಕಾರದ ಭೂಮಿಗಳಲ್ಲಿ, ಬೆಳೆಗಳು ಬೇರೆ ಬೇರೆಯಾಗಿರುವವು ನಮ್ಮ ರಾಜ್ಯದ ಬೆಳೆಗಳನ್ನು ತಿಳಿದುಕೊಳ್ಳಲು ನಾವು ಇಲ್ಲಿಯ ಭೂಮಿಯ ಪ್ರಕಾರಗಳ ಪರಿಚಯವನ್ನು ಮಾಡಿಕೊಳ್ಳಬೇಕು ಅವುಗಳ ಗುಣಧರ್ಮಗಳನ್ನು ತಿಳಿದುಕೊಳ್ಳಬೇಕು




ಆಕೃತಿ ೮ ಭೂಮಿಯ ಪ್ರಕಾರಗಳು

ಗುಜರಾಥವನ್ನೇ ನಾವು ಮೊದಲು ತೆಗೆದುಕೊಳ್ಳೋಣ. ಇಲ್ಲಿಯ ಭೂಮಿಯು ಸಮಭೂಮಿಯಾಗಿದೆ. ಅದರಿಂದ ನೀರಿನ ಕೂಡ ಮಣ್ಣು

ಹರಿದುಹೋಗುವದಿಲ್ಲ. ಇದಲ್ಲದೆ, ನರ್ಮದಾ, ತಾಪೀ ಹಾಗೂ ಸಾಬರಮತಿ ನದಿಗಳು ಫಲವತ್ತಾದ, ರೇವೆಯ ಮಣ್ಣನ್ನು ಪ್ರತಿ ವರುಷ ಇಲ್ಲಿ ತಂದು ಚೆಲ್ಲುವವು ಇಲ್ಲಿಯ ಭೂಮಿಯು ಕಸುವುಳ್ಳದ್ದಾಗಿದೆ ಭೂಮಿಯಲ್ಲಿ ಮಣ್ಣಿನ ಥರವು ದಪ್ಪವಾಗಿದೆ ಜಿಗಟು ಮಣ್ಣು ಆರ್ದ್ರತೆಯನ್ನು ಬಹಳ ಸಮಯ ಹಿಡಿದುಕೊಳ್ಳುವದು.

ಕೊಂಕಣದ ಭೂಮಿಯು ಗುಜರಾಥಕ್ಕಿಂತ ಭಿನ್ನವಾಗಿದೆ ಸಮುದ್ರದ ದಂಡೆ ಉಸುಕಿನ ಪ್ರದೇಶವಾಗಿದೆ ಭೂಮಿಯು ಇಳುಕಲು ಹಾಗು ಗುಡ್ಡಗಾಡು ಮಳೆಯೂ ಹೆಚ್ಚು ಮಳೆಯ ನೀರಿನಿಂದ ಮಣ್ಣೆಲ್ಲವೂ ಕೊಚ್ಚಿಕೊಂಡು ಹೋಗುವದು ಬೆಟ್ಟಗಳ ಓರೆಗುಂಟ ಚೌಕು ತುಂಡುಗಳನ್ನು ಮಾಡಿ ಅವುಗಳಿಗೆ ಒಡ್ಡು ಹಾಕಿ ಮಣ್ಣನ್ನು ಇಲ್ಲಿಯ ಒಕ್ಕಲಿಗರು ಉಳಿಸಿಕೊಳ್ಳುವರು ಇಲ್ಲಿಯ ಭೂಮಿಯು ಕೆಂಪು ಮಸಾರಿಯದಾಗಿದೆ

ತಪ್ಪಲಿನ ಭಾಗವು ಎರೆಭೂಮಿಯಾಗಿದೆ ಮಳೆ-ಬಿಸಿಲುಗಳ ಹೊಡೆತದಿಂದ ತಪ್ಪಲಿನ ಲಾವ್ಹಾ ಶಿಲೆಯು ಒಡೆದು, ಸವೆದು, ಕರಿಯ ಮಣ್ಣಾಗಿದೆ ಈ ಕರೀ ಎರೆ ಭೂಮಿಯು ಒಳ್ಳೇ ಕಸುವುಳ್ಳದ್ದು. ಖಾನದೇಶ, ಕರ್ನಾಟಕಗಳಲ್ಲಿ ಇಂಥ ಅಚ್ಚ ಕರಿನೆಲವನ್ನು ನಾವು ಕಾಣಬಹುದು ಹೊನ್ನು ಬಿತ್ತಿ ಹೊನ್ನು ಬೆಳೆದುಕೊಳ್ಳಬಹುದೆಂದು ಇಲ್ಲಿಯ ರೈತರು ಹೇಳಿಕೊಳ್ಳುವದುಂಟು ಕರೀ ಎರೆ ಭೂಮಿಯು ಹತ್ತಿಯ ಬೆಳೆಗೆ ಹೆಸರಾದುದು ತಪ್ಪಲಿನಲ್ಲಿ ಕೆಲವೆಡೆಗೆ ಮಸಾರಿ ಹಾಗೂ ಮಡಿಕಟ್ಟು ಭೂಮಿಗಳೂ ಕಂಡುಬರುವವು ನದಿಗಳ ಕೊಳ್ಳದ ಪ್ರದೇಶಗಳು ಒಳ್ಳೇ ಫಲವತ್ತಾಗಿರುವವು. ನರ್ಮದಾ, ತಾಪೀ ನದಿಗಳ ಹಾಗೂ ಕೃಷ್ಣಾ, ಭೀಮಾ ನದಿಗಳ ಕೊಳ್ಳಗಳಲ್ಲಿ ಬೆಳೆಯು ಹುಲುಸಾಗಿ ಬರುವದು ಸಕಾಲಕ್ಕೆ ಮಳೆಯಾದರೆ ಇವು ಅತ್ಯಂತ ಸಮೃದ್ಧಿಯ ಪ್ರದೇಶಗಳು.

### ಅಭ್ಯಸನಗಳು

೧. ಗುಜರಾಥದ ಭೂಮಿಯು ಯಾವ ಪ್ರಕಾರದ್ದು? ಅದು ಇಷ್ಟು ಫಲವತ್ತಾಗಿರಲು ಕಾರಣವೇನು?

೨ ಕೊಂಕಣದಲ್ಲಿ ಮಣ್ಣನ್ನು ಹೇಗೆ ಉಳಿಸಿಕೊಳ್ಳುವರು? ಇಲ್ಲಿಯ ಭೂಮಿಯು ಯಾವ ಪ್ರಕಾರದ್ದು?

೩. ತಪ್ಪಲಿನ ಭೂಮಿಯು ಎಂತಹದು? ಅದು ಹೇಗೆ ನಿರ್ಮಿತವಾಗಿದೆ?

೪. 'ಹೊನ್ನು ಬಿತ್ತಿ ಹೊನ್ನು ಬೆಳೆಯಬಹುದು' ಎಂಬ ಭೂಮಿಯು ಎಲ್ಲಿದೆ? ಅದಕ್ಕೆ ಹೀಗೆ ಹೆಸರು ಬರಲು ಕಾರಣವೇನು?

ಪ್ರಕರಣ ೬

# ಪೈರುಗಳು

ಮುಂಬಯಿ ರಾಜ್ಯದ ಹವೆ, ಮಳೆ ಹಾಗೂ ಭೂಮಿಗಳ ಬಗ್ಗೆ ತಕ್ಕ ಮಟ್ಟಿಗೆ ನೀವು ತಿಳಿದುಕೊಂಡಿರುವಿರಿ ರಾಜ್ಯದ ಪೈರುಗಳು ಈ ಸಂಗತಿಗಳನ್ನೇ ಅವಲಂಬಿಸಿರುವವು ಪೈರುಗಳಿಂದಲೇ ಪ್ರಾಣಿಜೀವನವು ಸಾಗುವದು. ನಮ್ಮ ನಿತ್ಯದ ಆಹಾರವು ಈ ಪೈರುಗಳಿಂದ ಪೂರೈಕೆಯಾಗುವದು. ಮುಂಬಯಿ ರಾಜ್ಯದಲ್ಲಿ ಬೆಳೆಯುವ ಮುಖ್ಯ ಬೆಳೆಗಳ ಬಗ್ಗೆ ಇಲ್ಲಿ ತಿಳಿದುಕೊಳ್ಳೋಣ. ನಮ್ಮ ನಿತ್ಯದ ಆಹಾರಕ್ಕಾಗಿ ಉಪಯೋಗಿಸುವ ಧಾನ್ಯಗಳು ಯಾವು ? ಹೇಳಿರಿ. ಅಕ್ಕಿ, ಗೋದಿ, ಜೋಳ, ಸಜ್ಜಿ, ನವಣೆ, ರಾಗಿ ಮೊದಲಾದವುಗಳು ಇವುಗಳಿಗೆ ಆಹಾರಧಾನ್ಯಗಳೆನ್ನುವರು ಇದಲ್ಲದೆ ನಾವು ಊಟದಲ್ಲಿ ಬೇಳೆ-ಕಾಳುಗಳನ್ನೂ, ಅಕ್ಕಡಿ-ಕಾಳುಗಳನ್ನೂ ಉಪಯೋಗಿಸುವೆವು. ಇವುಗಳಿಗೆ ಕಂಡ ಧಾನ್ಯಗಳು, (ದ್ವಿದಲ ಧಾನ್ಯ) ಬೇಳೆಕಾಳುಗಳೆಂದು ಹೇಳುವರು ನಾವು ಉಪಯೋಗಿಸುತ್ತಿರುವ ಬಗೆಬಗೆಯ ಎಣ್ಣೆಗಳನ್ನೂ ಬೇರೆ ಬೇರೆ ಕಾಳುಗಳಿಂದ ಮಾಡುವರು ಇವುಗಳಿಗೆ ಎಣ್ಣೆಯ ಕಾಳುಗಳೆಂದು ಕರೆಯುವರು. ನಾವು ಅಡಿಗೆಗಾಗಿ ಕುಸುಬೆ, ಸೇಂಗಾದಿಂದ ತಯಾರಿಸಿದ ಒಳ್ಳೆಣ್ಣೆ, ಸೇಂಗಾದ ಎಣ್ಣೆಗಳನ್ನು ಉಪಯೋಗಿಸುವೆವು

ನಮ್ಮ ಮುಂಬಯಿ ರಾಜ್ಯದಲ್ಲಿ ಭತ್ತವು ಎಲ್ಲೆಲ್ಲಿ ಬೆಳೆಯುವದು ಎಂಬುದನ್ನು ನೋಡಿರಿ ಭತ್ತದ ಬೆಳೆಗೆ ನೀರಿನ ಪೂರೈಕೆಯು ಹೆಚ್ಚಾಗಿರಬೇಕು ಮಳೆಯಾದರೂ ೫೦—೬೦ ಇಂಚುಗಳಿಗಿಂತಲೂ ಹೆಚ್ಚಿಗೆ ಆಗುತ್ತಿರಬೇಕು



ಆಕೃತಿ ೯ ಭತ್ತದ ಸಸಿಗಳನ್ನು ನೆಡುವದು

ಇಲ್ಲವೆ ಹೊಳೆ, ಕೆರೆಗಳಿಂದ ಕಾಲುವೆಗಳ ಮುಖಾಂತರವಾಗಿ ನೀರು ಒದಗಿಸು ತ್ತಿರಬೇಕು ಭೂಮಿಯು ರೇವೆಯ ಸೂಸುಮಣ್ಣಾಗಿರಬೇಕು ಈ ಜಿಗುಟು ಮಣ್ಣು ಆರ್ದ್ರತೆಯನ್ನು ದೀರ್ಘಕಾಲದ ವರೆಗೆ ಹಿಡಿದುಕೊಳ್ಳುವದು ಭೂಮಿಯು ನೀರು ನಿಲ್ಲುವಂತೆ ತಗ್ಗು ಇಲ್ಲವೆ ಸಮಪಾತಳಿ ಇದ್ದರೆ ಒಳಿತು ಏಕೆಂದರೆ ಭತ್ತದ ಸಸಿಗಳು ಕೆಲವು ಕಾಲ ನೀರಲ್ಲಿಯೇ ಬೆಳೆಯಬೇಕಾಗುವದು ಭತ್ತದ ಬೆಳೆಗೆ ಉಷ್ಣತೆಯು ಬೇಕು ನಾಕಷ್ಟು ಉಷ್ಣತೆ ಇಲ್ಲದಿದ್ದರೆ, ಭತ್ತವು ಬೆಳೆಯಲಾರದು

ವಿಪುಲವಾದ ಮಳೆ, ಉಷ್ಣಹವೆ ಹಾಗೂ ರೇವೆಯ ಭೂಮಿ—ಭತ್ತಕ್ಕ ಬೇಕಾಗುವ ಈ ಮೂರು ಸಂಗತಿಗಳು ಮುಂಬಯಿ ರಾಜ್ಯದ ಕೊಂಕಣ ಪ್ರದೇಶದಲ್ಲಿ ಕಂಡುಬರುವವು ಆದುದರಿಂದ ಕೊಂಕಣದ ಮುಖ್ಯ ಬೆ' ಹಾಗೂ ಆಹಾರವು ಭತ್ತವೇ ಆಗಿರುವದು ಇದಲ್ಲದೆ ಮಲೆನಾಡು ಹಾಗೂ ಮಲೆನಾಡ ಸೆರಗಿನ ಭಾಗಗಳಲ್ಲಿಯೂ ಭತ್ತವನ್ನು ಬೆಳೆಯುವರು. ಉಳಿದ ಭಾಗಗಳಲ್ಲಿ ಕೆರೆ-ಕಾಲುವೆಗಳ ಅನುಕೂಲವಿದ್ದಲ್ಲಿ ಮಾತ್ರ ಭತ್ತ ಬೆಳೆಯುವದು ಭತ್ತಕ್ಕೆ ಬೇಕಾಗುವಂತಹ ಭೂಮಿ, ಮಳೆ, ಉಷ್ಣ ಹವೆಗಳು ಕಬ್ಬು-ತಂಬಾಕು ಗಳ ಬೆಳೆಗೂ ಬೇಕಾಗುವವು ಆದುದರಿಂದ ಭತ್ತ ಬೆಳೆಯುವ ಭಾಗಗಳಲ್ಲಿ ಕಬ್ಬು ತಂಬಾಕುಗಳನ್ನೂ ಬೆಳೆಯುವರು ಕೊಲ್ಹಾಪೂರ, ದಕ್ಷಿಣ ಸಾತಾರಾ, ನಾಶಿಕ ಜಿಲ್ಹೆಗಳಲ್ಲಿ ಕಬ್ಬು ಹಾಗು ತಂಬಾಕು ಹೆಚ್ಚಾಗಿ ಬೆಳೆಯುವವು ಮುಂಬಯಿ ರಾಜ್ಯದ ಬೆಳೆಗಳ ನಕಾಶವನ್ನು ನೋಡಿರಿ ಈ ಮಾತು ನಿಮಗೆ ಹೊಳೆಯುವದು

ಗೋದಿಯು ಮುಂಬಯಿ ರಾಜ್ಯದ ಎಲ್ಲ ಭಾಗಗಳಲ್ಲಿಯೂ ಬೆಳೆಯುವ ದೆಂದು ಸಾಮಾನ್ಯವಾಗಿ ಹೇಳಬಹುದು ಗೋದಿಯ ಸಮೃದ್ಧವಾದ ಬೆಳೆಗೆ ಕೆಲವೊಂದು ಸಂಗತಿಗಳು ಬೇಕು

ಗೋದಿಗೆ ಸಣ್ಣೆರೆಯ ಕರಿಭೂಮಿ ಬೇಕು ಈ ಮಣ್ಣು ಮಿದು ವಾಗಿಯೂ, ಜಿಗುಟಾಗಿಯೂ ಇರುವದು. ಗೋದಿಯ ಸಸಿಗೆ ಬುಡದಲ್ಲಿ ನೀರು ನಿಲ್ಲಬಾರದು. ನೀರು ಹರಿದುಹೋಗುವಂತೆ ಇರಬೇಕು ಕಡಿಮೆ ಪ್ರಮಾಣದ ೧೫–೨೦ ಇಂಚುಗಳಷ್ಟು ಮಳೆಯು ಗೋದಿಗೆ ಸಾಕಾಗುವದು ಆರ್ದ್ರಹವೆಯಿಂದ ಗೋದಿಯ ಬೆಳೆಯು ಕೆಡುವದು ಬಹಳ ಉಷ್ಣವಲ್ಲದ, ಬಹಳ ಶೀತವಲ್ಲದ, ಮಂದೋಷ್ಣವಾದ ಹವೆಯು ಗೋದಿಗೆ ಹಿತಕರವಾಗಿದೆ ಮಳೆಗಾಲದ ಕೂನೆಗೆ ಇದರ ಬೆಳೆಯನ್ನು ತೆಗೆದುಕೊಳ್ಳುವರು. ಇದು

ಹಿಂಗಾರಿಯ ಪೈರುಗಳಲ್ಲಿ ಒಂದಾಗಿರುವದು. ಮುಂಬಯಿ ರಾಜ್ಯದ ಗುಜರಾಥದಲ್ಲಿ ಗೋದಿ ಬೆಳೆಯುವದು. ಮಹಾರಾಷ್ಟ್ರದ ಖಾನದೇಶ, ನಾಸಿಕ ಜಿಲ್ಹೆಗಳಲ್ಲಿಯೂ ಗೋದಿ ಬೆಳೆಯುವದು ಕರ್ನಾಟಕದಲ್ಲಿ ಕಾರವಾರ ಜಿಲ್ಹೆಯೊಂದನ್ನು ಬಿಟ್ಟು ಉಳಿದ ಜಿಲ್ಹೆಗಳಲ್ಲಿ ಗೋದಿ ಬೆಳೆಯುವದು ವಿಜಾಪೂರ ಜಿಲ್ಹೆಯಲ್ಲಿ ಡೋಣೀನದಿಯ ಇಬ್ಬದಿಯ ಕಸುವಿನ ಭೂಮಿಯಲ್ಲಿ ಗೋದಿಯು ವಿಪುಲವಾಗಿ ಬೆಳೆಯುವದು. ಗೋದಿಯ ಸಸಿಗಳು ಸೂಕ್ಷ್ಮವಾದವುಗಳು ಅವುಗಳಿಗೆ ರೋಗದ ಭೀತಿ ಬಹಳ ಮಳೆ ಹೆಚ್ಚಾಗಿ ಇಲ್ಲವೆ ಅನಿಷ್ಟವಾದ ಗಾಳಿಯಿಂದ ‘ ಇಟ್ಟಂಗಿ ’ ಯಂತಹ ರೋಗಗಳುಂಟಾಗಿ ಗೋದಿಯ ಬೆಳೆಯೆಲ್ಲ ಕೆಟ್ಟುಹೋಗುವದುಂಟು ಗೋದಿಯು ಬೆಳೆಯುವಲ್ಲಿಯೇ ಜವೆಗೋದಿ, ಗೋವಿನಜೋಳ, ಕಡಲೆಗಳನ್ನು ಬೆಳೆಯುವದುಂಟು.




ಆಕೃತಿ ೧೦ ಮುಂಬಯಿ ರಾಜ್ಯದ ಬೆಳೆಗಳು

ಗೋದಿಯು, ಮುಂಬಯಿ ರಾಜ್ಯದಲ್ಲಿ ಗುಜರಾಥೀಯರಿಗೆ, ಕೆಲವು ಮಹಾರಾಷ್ಟ್ರೀಯರಿಗೆ ದಿನದ ಊಟವಾಗಿದೆ ಆದರೆ ಕನ್ನಡಿಗರಾದ ನಮಗ

ಗೋದಿಯು ಹಬ್ಬದ ಊಟವೆಂದೇ ಹೇಳಬಹುದು ನಮ್ಮ ದಿನದ ಊಟ ವಲ್ಲಿ ನಾವು ಜೋಳ, ಸಜ್ಜೆಗಳನ್ನೇ ಉಪಯೋಗಿಸುವೆವು ಮೈಸೂರು ರಾಜ್ಯ ದಲ್ಲಿ ಹಾಗೂ ಅದಕ್ಕೆ ಹೊಂದಿಕೊಂಡಿರುವ ಮುಂಬಯಿ ರಾಜ್ಯದ ಕೆಲವೇ ಭಾಗಗಳಲ್ಲಿ ಜೋಳ, ಸಜ್ಜೆಗಳ ಬದಲಾಗಿ ರಾಗಿಯನ್ನು ಉಪಯೋಗಿಸುವರು

ಜೋಳ, ಸಜ್ಜೆ, ರಾಗಿ, ನವಣೆ, ನಾಂವಿ ಇವುಗಳಿಗೆ ತೃಣಧಾನ್ಯ ಗಳೆಂದು ಹೇಳುವರು ಈ ರಾಜ್ಯದ ಮಳೆಯ ಬಗ್ಗೆ ಹೇಳುವಾಗ್ಗೆ ಪೂರ್ವದ



ಆಕೃತಿ ೧೦ ಜೋಳದ ಬೆಳೆ

ತಪ್ಪಲಿನಲ್ಲಿ ಮಳೆಯು ಕಡಿಮೆಯಾಗುವದು, ಹಾಗೂ ಇದು ಮಳೆಯ ನೆರಳಿನ (ಪರ್ಜನ್ಯಛಾಯಾ) ಪ್ರದೇಶವಾಗಿರುವದೆಂದು ಹೇಳಿದ ಮಾತು ನೀವು ಮರೆತಿರಲಿಕ್ಕಿಲ್ಲ ಇಂಥ ಪ್ರದೇಶಗಳಲ್ಲಿ ೧೫—೨೦ ಇಂಚುಗಳಷ್ಟು ಕಡಿಮೆ ಪ್ರಮಾಣದ ಮಳೆಯಾಗುವದು ಭೂಮಿಯಾವರೂ ಅಷ್ಟು ಕಸುವುಳ್ಳದ್ದಲ್ಲ ಸಾಕಷ್ಟು ಉಷ್ಣತೆಯಿರುವದು. ಇಂಥ ಪ್ರದೇಶಗಳಲ್ಲಿ ಜೋಳ, ಸಜ್ಜೆ ಮೊದ ಲಾದ ತೃಣಧಾನ್ಯಗಳು ಸಮೃದ್ಧವಾಗಿ ಬೆಳೆಯುವವು ಕಸುವುಳ್ಳ ಎರೇ ಭೂಮಿಯಲ್ಲಿಯೂ ಜೋಳವನ್ನು ಬೆಳೆಯುವದುಂಟು ತೃಣಧಾನ್ಯಗಳನ್ನು ಮುಂಗಾರಿ, ಹಿಂಗಾರಿ ಎರಡೂ ಪೈರುಗಳನ್ನಾಗಿ ಬೆಳೆದುಕೊಳ್ಳುವರು ಗೊಬ್ಬರ ದಿಂದ ಕಸುವೇರಿದ ಭೂಮಿ, ಹದವರಿತು ಬಿದ್ದ ಮಳೆಯ ಸೆಳಕುಗಳು ಕೂಡಿಕೊಂಡರೆ ಜೋಳ, ಸಜ್ಜೆಗಳು ಹುಲುಸಾಗಿ ಬೆಳೆಯುವವು ಒಕ್ಕಲಿಗರು ಮುಂದಿನ ಮೂರು ವರುಷಗಳ ವರೆಗೆ ತಮ್ಮ ಹಗೆಗಳಲ್ಲಿ ಕಾಳನ್ನು ಸಂಗ್ರಹಿ ಸುವರು ದುಡಿಯುವವರಿಗೆ ಈ ಭಾಗಗಳಲ್ಲಿ ಜೋಳ, ಸಜ್ಜೆಗಳ ರೊಟ್ಟಿಯೇ

ಮುಖ್ಯವಾದ, ಅಗ್ಗವಾದ ಆಹಾರ. ಡೋಣಿಯ 'ಹವಳದಂಥ' ಗೋದಿ, ಕೃಷ್ಣಾ, ಭೀಮಾ ತೀರಗಳ 'ಮುತ್ತಿನಂಥ' ಜೋಳ ಎಂದಿನಿಂದಲೂ ಹೆಸರಾಗಿವೆ ಇದೇ ಮೇರೆಗೆ ಕಚ್ಛ, ಕಾಠೇವಾಡಗಳಲ್ಲಿ ಹಾಗೂ ಗುಜರಾಥದಲ್ಲಿ ಉತ್ತಮವಾದ ಸೆಜ್ಜಿಯನ್ನು ಬೆಳೆಯುವರು

ನಿಮ್ಮ ಜೋಳದ ರೊಟ್ಟಿ ತೊಗರಿಯ 'ಬ್ಯಾಳಿ' ಗಾಗಿ ದಿನಾಲು ದಾರಿ ಕಾಯುವದಿಲ್ಲವೆ? ತೊಗರಿ, ಹೆಸರು, ಕಡಲೆ ಇವುಗಳ ಬೇಳೆಗಳನ್ನು ನಾವು ನಿತ್ಯದ ಊಟದಲ್ಲಿ ಉಪಯೋಗಿಸುವೆವು ಶಾಕಾಹಾರಿಗಳಾದ ನಮಗೆ ಬೇಳೆಯ ಕಾಳುಗಳೇ ಶರೀರಕ್ಕೆ ಬೇಕಾಗುವ ಕ್ಷಾರಗಳನ್ನೂ. ಸತ್ವಗಳನ್ನೂ ಒದಗಿಸುವವು ಒಡೆದು ಎರಡು ಭಾಗಗಳನ್ನಾಗಿ ಮಾಡುವದರಿಂದ, ಇವು ಗಳಿಗೆ ಕಡಧಾನ್ಯ-ದ್ವಿದಲಧಾನ್ಯಗಳೆಂದು ಹೇಳುವದುಂಟು ಕಡಲೆ, ತೊಗರಿ, ಹೆಸರು, ಉದ್ದು, ಸೇಂಗಾ ಹಾಗೂ ಅವರಿ ಇವೆಲ್ಲ ದ್ವಿದಲ ಧಾನ್ಯಗಳು. ತೃಣಧಾನ್ಯ ಬೆಳೆಯುವಲ್ಲೆಲ್ಲ ಈ ಬೇಳೆಯ ಕಾಳುಗಳೂ ಬೆಳೆಯುವವು. ಇವು ಗಳನ್ನು ತೃಣಧಾನ್ಯಗಳ ಜೊತೆಯಲ್ಲಿಯೇ ಬೆಳೆಯುವರು ಬಡ ಭೂಮಿ, ಒಣದಾದ ಉಷ್ಣಹವೆ, ಕಡಿಮೆ ಮಳೆ ಇರುವಲ್ಲಿ ಬೇಳೆಯ ಕಾಳುಗಳನ್ನು ಬೆಳೆಯುವರು ಖಾನದೇಶದಲ್ಲಿ ಹಾಗೂ ಕಾರವಾರವನ್ನು ಬಿಟ್ಟು ಕರ್ನಾಟಕದ ಉಳಿದ ಜಿಲ್ಹೆಗಳಲ್ಲಿ ಇವುಗಳನ್ನು ಬೆಳೆಯುವರು.

ಈ ದ್ವಿದಲ ಧಾನ್ಯಗಳಲ್ಲಿ ಸೇಂಗಾ ಸೇರ್ಪಡೆಯಾದರೂ, ಅದೊಂದು ಬೇರೆ ಗುಂಪಿಗೆ ಸೇರುವದು ಸೇಂಗಾದಿಂದ ಎಣ್ಣೆಯನ್ನು ತೆಗೆಯುವರು ಎಣ್ಣೆ ತೆಗೆಯುವ ಬೀಜಗಳಿಗೆಲ್ಲ ಎಣ್ಣೆಕಾಳುಗಳೆಂದು ಹೇಳುವರು ಸೇಂಗಾ, ಕುಸುಬೆ, ಅಗಸಿ, ಎಳ್ಳು ಹಾಗೂ ಔಡಲ ಇವು ಎಣ್ಣೆ ತೆಗೆಯುವದಕ್ಕಾಗಿ ಉಪಯುಕ್ತವಾದವುಗಳು ಜೋಳ, ಸೆಜ್ಜಿ ಬೆಳೆಯುವ ಮಸಾರಿ ಭೂಮಿ ಯಲ್ಲಿ ಇಲ್ಲವೆ ಉಸುಕಿನ ಪೊಳ್ಳು ನೆಲದಲ್ಲಿ ಇವುಗಳನ್ನು ಬೆಳೆಯುವರು· ಒಕ್ಕಲಿಗರು ಈ ಕಾಳುಗಳನ್ನು ಮಾರಿ ಹಣ ಗಳಿಸುವದರಿಂದ ಇವುಗಳಿಗೆ 'ಹಣದ ಬೆಳೆ' ಯೆಂದು ಹೇಳುವದುಂಟು ಹಣದ ಲಾಭಕ್ಕಾಗಿ, ಇತ್ತೀಚೆಗೆ ಕರ್ನಾಟಕದ ಜಿಲ್ಹೆಗಳಾದ ಬೆಳಗಾಂವ, ಧಾರವಾಡ, ವಿಜಾಪುರಗಳಲ್ಲಿ ಶೇಂಗಾದ ಉತ್ಪತ್ತಿಯು ಹೆಚ್ಚುತ್ತಲಿರುವದು. ಹೊರನಾಡುಗಳಿಗೆ ಕಳಿಸುವ ದಕ್ಕಾಗಿ ವ್ಯಾಪಾರಸ್ಥರು ಇವುಗಳನ್ನು ದೊಡ್ಡ ಪ್ರಮಾಣದಿಂದ ಕೊಂಡು ಕೊಳ್ಳುವದುಂಟು ಎಲ್ಲ ಊರುಗಳಲ್ಲಿ ಕುಸುಬೆ, ಸೇಂಗಾಗಳಿಂದ ಎಣ್ಣೆ

ಯನ್ನು ತೆಗೆಯುವರು. ಶೇಂಗಾ, ಎಳ್ಳುಗಳಿಂದ ಮುಂಬಯಿಯಲ್ಲಿ 'ವನಸ್ಪತಿ' ತುಪ್ಪವನ್ನು ತಯಾರಿಸುವರು ಔಡಲ ಬೀಜಗಳು ಔಷಧಕ್ಕಾಗಿ ಹಾಗು ಹರೆಯೆಣ್ಣೆಗಾಗಿ ಉಪಯೋಗವಾಗುವವು ಅಗಸಿಯ ಎಣ್ಣೆಯನ್ನು ಬಣ್ಣ, ವಾರನೀಸುಗಳಿಗಾಗಿ ಉಪಯೋಗಿಸುವರು

ಮುಂಬಯಿ ರಾಜ್ಯದ ಮಲೆನಾಡಿನ ಭಾಗಗಳಲ್ಲಿ ಮಸಾಲೆ ಸಾಮಾನುಗಳು ಬೆಳೆಯುವವು ಇವುಗಳಿಗೆ ೮೦ ಇಂಚುಗಳಿಗಿಂತಲೂ ಹೆಚ್ಚು ಮಳೆ ಬೇಕು ಉಷ್ಣವೂ ಆರ್ದ್ರವೂ ಆದ ಹವೆಯಿರಬೇಕು ಉಸುಕಿನಿಂದ ಕೂಡಿದ ಪೊಳ್ಳು ಭೂಮಿ ಇರಬೇಕು ಮಸಾಲೆ ಸಾಮಾನುಗಳಲ್ಲಿ ಮೆಣಸು ಹಾಗೂ ಯಾಲಕ್ಕಿ ಇವೆರಡು ಮಾತ್ರ ನಮ್ಮ ರಾಜ್ಯದಲ್ಲಿ ಬೆಳೆಯುವವು. ಮೆಣಸಿನ ಬಳ್ಳಿಗಳನ್ನು ಮಾವಿನ ಗಿಡಕ್ಕೆ ಹಬ್ಬಿಸುವರು ಇದಕ್ಕೆ ಸಣ್ಣ ಕಾಯಿಗಳ ಗೊಂಚಲಗಳಾಗುವವು. ಒಣಗಿಸಿದ ಮೆಣಸು ಕರಿಯ ಮೆಣಸು ತೋಟಿ ಸುಲಿದ ಮೆಣಸು ಬಿಳಿಯ ಮೆಣಸು ಯಾಲಕ್ಕಿಯೂ ಒಂದು ಬಳ್ಳಿಯ ಕಾಯಿಯಾಗಿದೆ ಮೆಣಸು ಹಾಗೂ ಯಾಲಕ್ಕಿಗಳು ಕರಾವಳಿ ಜಿಲ್ಹೆಯಾದ ಕಾರವಾರದಲ್ಲಿ ಬೆಳೆಯುವವು. ಶಿರಸಿ, ಸಿದ್ದಾಪೂರ ತಾಲೂಕುಗಳಲ್ಲಿ ಅಡಕೆ, ತೆಂಗು, ಮೆಣಸು, ಯಾಲಕ್ಕಿಗಳೇ ಮುಖ್ಯ ಬೆಳೆಗಳಾಗಿವೆ



ಆಕೃತಿ ೧೨ ಹತ್ತಿಯ ಬೆಳೆ

ಮುಂಬಯಿ ರಾಜ್ಯದ ಇನ್ನೊಂದು ಮಹತ್ತ್ವದ ಬೆಳೆಯನ್ನು ಕೊನೆಯವಾಗಿ ಕಾಣಬೇಕಾಗಿದೆ. ಈ ರಾಜ್ಯವು ಹತ್ತಿಯ ಬೆಳೆಗಾಗಿ ಪ್ರಸಿದ್ಧವಾಗಿದೆ. ಹತ್ತಿಯ ಬೆಳೆಗೆ ಕಸುವುಳ್ಳ ಕರಿಯ ಭೂಮಿ ಬೇಕು. ದಕ್ಷಿಣದ ತಪ್ಪಲಿನಲ್ಲಿ

ಲಾವ್ಹಾ ಶಿಲೆಯಿಂದ ಉಂಟಾದ ಇಂಥ ಮಣ್ಣಿನ ಆಳವಾದ ಥರವು ಅನೇಕ ಕಡೆಗಳಲ್ಲಿ ಕಂಡುಬರುವದು ಹತ್ತಿಯ ಬೆಳೆಗೆ ೨೦–೩೦ ಇಂಚುಗಳಷ್ಟು ಮಳೆ ಸಾಕು ಇದು ಉಷ್ಣ ಪ್ರದೇಶದ ಬೆಳೆ ಹತ್ತಿಯ ಕಾಯಿಯು ಬಿರಿದು ಒಳಗಿನ ಹತ್ತಿಯು ಹೊರಗೆ ಬರಬೇಕಾದರೆ, ಸಾಕಷ್ಟು ಉಷ್ಣತೆಯು ಅಗತ್ಯ ವಾಗಿರುವದು ಸಮುದ್ರದ ಗಾಳಿಗಳು ಬೀಸುವ ಎಡೆಯಲ್ಲಿ ಹತ್ತಿಯ ಉತ್ಪತ್ತಿಯೂ ಹೆಚ್ಚು, ಎಳೆಗಳೂ ಉದ್ದವಾಗುವವು. ಮಂಜು ಬೀಳುವದು ಹತ್ತಿಗೆ ಅಪಾಯಕರವಾಗುವದು ಈ ರಾಜ್ಯದಲ್ಲಿ ಹತ್ತಿಯ ಬೆಳೆಗಾಗಿ ಗುಜರಾಥವೆ ಮೊದಲಿನದು, ಖಾನದೇಶವು ಎರಡನೆಯದು, ಕರ್ನಾಟಕದ ದಕ್ಷಿಣ ಜಿಲ್ಹೆಗಳು ಮೂರನೆಯವಾಗಿವೆ ಹತ್ತಿಯು ಬಟ್ಟೆಗಾಗಿ, ಹತ್ತಿಯ ಕಾಳುಗಳು ದನಕರುಗಳಿಗಾಗಿ ಉಪಯೋಗವಾಗುವದನ್ನು ನೀವು ಬಲ್ಲಿರಿ ಇದಲ್ಲದೆ ಎಣ್ಣೆ ತೆಗೆಯುವದಕ್ಕಾಗಿಯೂ ಹತ್ತಿಯ ಕಾಳನ್ನು ಉಪಯೋಗಿಸುವರು

## ಅಭ್ಯಸನಗಳು

೧ ಭತ್ತದ ಬೆಳೆಗೆ ಬೇಕಾಗುವ ಸಂಗತಿಗಳು ಯಾವವು ? ಮುಂಬಯಿ ರಾಜ್ಯದಲ್ಲಿ ಭತ್ತವು ಎಲ್ಲಿ ಬೆಳೆಯುವದು ?

೨ ತಪ್ಪಲಿನ ಮುಖ್ಯ ಬೆಳೆಗಳು ಯಾವು ? ಏಕೆ ?

೩ ಈ ರಾಜ್ಯದಲ್ಲಿ ಬೆಳೆಯುವ ಮುಖ್ಯ ಎಣ್ಣೆಕಾಳುಗಳು ಯಾವು ? ಅವುಗಳ ಉಪಯೋಗವೇನು ?

೪ ಈ ರಾಜ್ಯದಲ್ಲಿ ಹಣದ ಬೆಳೆಗಳು ಯಾವು ? ಎಲ್ಲಿ ಹೆಚ್ಚಾಗಿ ಬೆಳೆಯುವವು ?

೫ ಈ ರಾಜ್ಯದಲ್ಲಿ ಯಾಲಕ್ಕಿ, ಮೆಣಸುಗಳು ಎಲ್ಲಿ ಬೆಳೆಯುವವು ?

೬. ಈ ರಾಜ್ಯದ ಯಾವ ಭಾಗಗಳಲ್ಲಿ ಹತ್ತಿಯನ್ನು ಬೆಳೆಯುವರು ? ಏಕೆ ?

### ಪ್ರಕರಣ ೭

# ರಾಜಕೀಯ ವಿಭಾಗಗಳು

ಇದುವರೆಗೆ ನಾವು ಮುಂಬಯಿ ರಾಜ್ಯವನ್ನು ತುಸು ದೂರದಲ್ಲಿ ನಿಂತು ನೋಡಿದೆವು ರಾಜ್ಯದಲ್ಲಿ ಸುತ್ತಾಡಿ ಬೇರೆ ಬೇರೆ ಭಾಗಗಳಲ್ಲಿಯ ಭೂಮಿಯ ಏರಿಳಿತಗಳನ್ನು, ಹೊಳೆ ಬೆಟ್ಟಗಳನ್ನು, ಪೈರುಗಳನ್ನು ನೋಡಿಕೊಂಡೆವು ಮುಂಬಯಿ ರಾಜ್ಯದ ಭೂರಚನೆ, ಸ್ವಾಭಾವಿಕ ಪ್ರದೇಶಗಳ ಬಗ್ಗೆ ಸಾಮಾನ್ಯ

ಪರಿಚಯವನ್ನು ಮಾಡಿಕೊಂಡಿರುವೆವು. ಇನ್ನು ಈ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ನಾವು ಪ್ರವೇಶಿಸೋಣ ಆಡಳಿತದ ಅನುಕೂಲತೆಗಾಗಿ ಈ ಭಾಗಗಳನ್ನು ಮಾಡಿರುವರೆಂದು ಹಿಂದೆ ನಿಮಗೆ ಹೇಳಿದೆ ಇವೇ ಮುಂಬಯಿ ರಾಜ್ಯದ ರಾಜಕೀಯ ವಿಭಾಗಗಳು

## ಇಂದಿನ ರಾಜಕೀಯ ವಿಭಾಗಗಳು

ಮುಂಬಯಿ ರಾಜ್ಯದಲ್ಲಿ ಮೂರು ಮುಖ್ಯವಾದ ರಾಜಕೀಯ ವಿಭಾಗ ಗಳು;- ೧) ಉತ್ತರ ಭಾಗ, ೨) ಮಧ್ಯಭಾಗ ಹಾಗೂ ೩) ದಕ್ಷಿಣ ಭಾಗ

ಆಕೃತಿ ೧೩ ಮುಂಬಯಿ ರಾಜ್ಯ—ರಾಜಕೀಯ ವಿಭಾಗಗಳು

ಇಂದಿನ ಈ ರಾಜಕೀಯ ವಿಭಾಗಗಳು ಸ್ಥಿರವಾದವುಗಳಲ್ಲ ಇವು ಕಾಲಾನುಸಾರವಾಗಿ ಬದಲಿಸಬಹುದು. ಈಗಿನ ರಾಜ್ಯಗಳನ್ನು ಯೋಗ್ಯ ವಾದ ತಳಹದಿಯ ಮೇಲೆ ಪುನಃಕಟ್ಟಲು ಭಾರತ ಸರಕಾರವು ಒಂದು

ಸಮಿತಿಯನ್ನು ನೇಮಿಸಿರುವದು ಅವರು ಮಾಡುವ ಸೂಚನೆಗಳಿಂದ ಈಗಿನ ವಿಭಾಗಗಳಲ್ಲಿ ಎಷ್ಟೋ ಹೆಚ್ಚು ಕಡಿಮೆಗಳಾಗುವವು

ಇವುಗಳಲ್ಲಿ ಉತ್ತರಭಾಗವೇ ಎಲ್ಲಕ್ಕೂ ದೊಡ್ಡದು ಈ ಭಾಗದಲ್ಲಿ ೧) ಅಹ್ಮದಾಬಾದ, ೨) ಖೇಡಾ, ೩) ಪಂಚಮಹಾಲ, ೪) ಭಡೋಚ, ೫) ಸುರತ, ೬) ಬಡೋದೆ, ೭) ಮೇಸಣಾ, ೮) ಅಮರೇಲಿ, ೯) ಸಾಬರ ಕಾಂಠಾ, ೧೦) ಬನಾಸ ಕಾಂಠಾ, ೧೧) ರಾಣಿ ಹಾಗೂ ೧೨) ಡಾಂಗ ಎಂಬ ೧೨ ಜಿಲ್ಹೆಗಳು ಸಮಾವೇಶವಾಗುವವು.

ಮಧ್ಯಭಾಗದಲ್ಲಿ ೧) ಪೂರ್ವ ಖಾನದೇಶ, ೨) ಪಶ್ಚಿಮ ಖಾನದೇಶ, ೩) ನಾಶಿಕ, ೪) ಪುಣೆ, ೫) ಅಹಮ್ಮದನಗರ, ೬) ಸಾತಾರೆ, ೭) ದಕ್ಷಿಣ ಸಾತಾರೆ, ೮) ಕೊಲ್ಹಾಪೂರ, ೯) ಸೊಲ್ಲಾಪೂರ ಎಂಬ ೯ ಜಿಲ್ಹೆಗಳಿರುವವು

ದಕ್ಷಿಣ ಭಾಗದಲ್ಲಿ ೧) ಬೆಳಗಾಂವಿ, ೨) ಧಾರವಾಡ, ೩) ಕಾರವಾರ, ೪) ವಿಜಾಪೂರ, ೫) ಕುಲಾಬಾ, ೬) ರತ್ನಾಗಿರಿ ಹೀಗೆ ಆರು ಜಿಲ್ಹೆಗಳಿರುವವು

ಮುಂಬಯಿ ನಡುಗಡ್ಡೆಯು ಒಂದು ಪ್ರತ್ಯೇಕವಾದ ಭಾಗವಾಗಿದೆ ಮುಂಬಯಿ ಭಾಗದಲ್ಲಿ ಸುತ್ತಲೂ ಬೆಳೆದಿರುವ ಉಪನಗರಗಳೆಲ್ಲ ಸೇರಿವೆ

## ಗುಜರಾಥ

ಮೊದಲು ಅತಿ ದೊಡ್ಡದಾದ ಉತ್ತರ ಭಾಗವನ್ನೇ ನೋಡೋಣ ಗುಜರಾಥದ ನಕಾಶವನ್ನು ನಿರೀಕ್ಷಿಸಿರಿ ಅರವಲಿ, ವಿಂಧ್ಯಾದ್ರಿ ಹಾಗೂ ಸಾತಪುಡಾ ಬೆಟ್ಟಗಳು ಈ ರಾಜ್ಯದ ಉತ್ತರಕ್ಕೆ ಹಾಗೂ ಪೂರ್ವದ ಸೀಮೆ ಗುಂಟ ಹಬ್ಬಿರುವವು. ನಡುವಿನ ಪ್ರದೇಶವೆಲ್ಲವೂ ಸಮನೆಲದ ಬಯಲು ತಾಪಿ, ನರ್ಮದಾ, ಸಾಬರಮತಿ ಮೊದಲಾದ ನದಿಗಳ ರೇವೆಯಿಂದ ರಚಿತ ವಾದ ಈ ಭೂಮಿ ಒಳ್ಳೇ ಫಲವತ್ತಾದುದು. ಇಲ್ಲಿಯ ಹವೆಯು ವಿಷಮ ವಾದುದು ಮಳೆ ೩೦–೩೫ ಇಂಚುಗಳಷ್ಟು. ಹತ್ತಿಯೇ ಇಲ್ಲಿಯ ಮುಖ್ಯ ಬೆಳೆಯು

ಅಹಮ್ಮದಾಬಾದ, ಖೇಡಾ, ಭಡೋಚ, ಸುರತ, ಬಡೋದೆ, ಅಮರೇಲಿ, ಮೇಸಾಣಾ ಈ ಊರುಗಳು ಅದೇ ಹೆಸರಿನ ಜಿಲ್ಹೆಗಳ ಮುಖ್ಯ ನಗರಗಳು ಗೋಧರಾ ಇದು ಪಂಚಮಹಾಲ ಜಿಲ್ಹೆಯ, ಪಾಲನಪೂರ ಇದು ಬನಾಸಕಾಂಠಾ ಜಿಲ್ಹೆಯ, ಪರಾಂತೀಜ ಇದು ಸಾಬರಕಾಂಠಾ ಜಿಲ್ಹೆಯ ಮುಖ್ಯ ಪಟ್ಟಣಗಳಾಗಿವೆ

ಗುಜರಾಥದಲ್ಲಿ ನೀವು ನೋಡಬೇಕಾದ ಕೆಲವೊಂದು ಊರುಗಳಿವೆ ಅವುಗಳಲ್ಲಿ ಅಹ್ಮದಾಬಾದವೇ ಮೊದಲನೆಯದು ಗುಜರಾಥವು ಮೊದಲು ಸುಲ್ತಾನರ ಆಳಿಕೆಯಲ್ಲಿತ್ತು. ಸುಲ್ತಾನ ಅಹ್ಮದನೆಂಬವನು ಈ ನಗರವನ್ನು ಸುಮಾರು ೫೦೦ ವರುಷಗಳ ಮುಂಚೆ ಸ್ಥಾಪಿಸಿದನು ಆದರಿಂದ ಆತನ ಹೆಸರೇ ಈ ನಗರಕ್ಕೆ ಬಂದಿದೆ ಮುಂಬಯಿ ರಾಜ್ಯದಲ್ಲಿ ಮುಂಬಯಿ ಬಿಟ್ಟರೆ, ಅಹ್ಮದಾಬಾದವೇ ಎರಡನೆಯ ದೊಡ್ಡ ನಗರವಾಗಿದೆ ಈ ನಗರದ ಜನಸಂಖ್ಯೆಯು ಎಂಟು ಲಕ್ಷಕ್ಕೆ ಮಿಕ್ಕಿದೆ. ಇಲ್ಲಿ ಅನೇಕ ನೂಲುವ ಗಿರಣಿಗಳಿವೆ ಗುಜರಾಥದ ಎಲ್ಲ ಭಾಗಗಳಿಗೆ ಇದು ರೇಲ್ವೆ ಮಾರ್ಗಗಳಿಂದ,




**ಆಕೃತಿ ೧೪ ಗುಜರಾಥ**

ರಹದಾರಿಗಳಿಂದ ಜೋಡಿಸಲ್ಪಟ್ಟಿದೆ. ಸುತ್ತಲೂ ಬೆಳೆಯುವ ಹತ್ತಿಯು ಇಲ್ಲಿ ಬಳಿದು ಬರುತ್ತಿದೆ ಇದು ಗುಜರಾಥ ವಿದ್ಯಾಪೀಠದ ಕೇಂದ್ರವಾಗಿದೆ.

ಎಲ್ಲ ಬಗೆಯ ಶಾಲೆ, ಕಾಲೇಜುಗಳು ಈ ನಗರದಲ್ಲಿ ಇರುವವು ಈ ನಗರದ ಸಮೀಪದಲ್ಲಿಯೇ ಹರಿಯುವ ಸಾಬರಮತಿ ನದಿಯ ತೀರದಲ್ಲಿ ಗಾಂಧೀಜಿಯವರು 'ಸಾಬರಮತಿ ಆಶ್ರಮ' ವನ್ನು ಸ್ಥಾಪಿಸಿದ್ದರು

ಸುರತ ಪಟ್ಟಣವನ್ನು ನೀವು ನೋಡಬೇಕು ಈ ಪಟ್ಟಣವು ತಾಪೀ ನದಿಯ ಮುಖದಲ್ಲಿದೆ ಇದು ಮೊದಲು ಒಳ್ಳೇ ಬಂದರವಾಗಿತ್ತು. ಇಂಗ್ಲಿಷರು ತಮ್ಮ ಮೊದಲಿನ ವಖಾರಗಳನ್ನು ಇಲ್ಲಿಯೆ ಸ್ಥಾಪಿಸಿದ್ದರು ಇಲ್ಲಿ ಎರಡು ಲಕ್ಷಕ್ಕಿಂತಲೂ ಹೆಚ್ಚು ಜನವಸತಿ ಇರುವದು ಇಲ್ಲಿಯೂ ಬಟ್ಟೆಯ ಗಿರಣಿಗಳಿವೆ ಇಲ್ಲಿಯ ರೇಶಿಮೆ ಹಾಗೂ ಜರತಾರಿಯ ಬಟ್ಟೆಗಳು ಹೆಸರಾದವುಗಳು

ಗುಜರಾಥದಲ್ಲಿ ಬಡೋದೆಯು ನೋಡತಕ್ಕ ಸ್ಥಳವಾಗಿದೆ ಇದು ಗಾಯಕವಾಡ ಸಂಸ್ಥಾನದ ಮೊದಲಿನ ರಾಜಧಾನಿಯು ಇಲ್ಲಿಯ ಅರಮನೆಗಳು, ಉದ್ಯಾನಗಳು, ಕಲಾಮಂದಿರಗಳು ಹಾಗೂ ವಸ್ತುಸಂಗ್ರಹಾಲಯಗಳು ನೋಡತಕ್ಕಂಥವುಗಳಾಗಿವೆ ಇಲ್ಲಿಯೂ ಒಂದು ವಿಶ್ವವಿದ್ಯಾಲಯವಿದೆ. ಬಟ್ಟೆ ಗಿರಣಿಗಳೂ ಇಲ್ಲಿ ಇರುವವು

ಗುಜರಾಥದ ನೆರೆಯ ಪ್ರದೇಶವಾದ ಸೌರಾಷ್ಟ್ರ (ಕಾಠಿಯಾವಾಡ)ದಲ್ಲಿ ಒಂದೆರಡು ನೀವು ನೋಡಬೇಕಾದ ಸ್ಥಳಗಳಿವೆ. ದ್ವಾರಕೆಯ ಹೆಸರನ್ನು ಯಾರು ಕೇಳಿಲ್ಲ! ಅದು ಶ್ರೀಕೃಷ್ಣನ ಪ್ರಾಚೀನ ರಾಜಧಾನಿ ಸಮುದ್ರದ ತೀರದ ಮೇಲಿದೆ ಇಂದಿಗೂ ಪ್ರಸಿದ್ಧವಾದ ಯಾತ್ರೆಯ ಸ್ಥಳವಾಗಿದೆ ನಗರದ ಸುತ್ತಲೂ ಸುಣ್ಣದ ಹರಳುಗಳು ದೊರೆಯುವದರಿಂದ ಅಲ್ಲಿ ಸಿಮೆಂಟಿನ ಕಾರಖಾನೆಗಳಿರುವವು.

ಮೂರ್ತಿಭೇದಕನಾದ ಘಜನೀ ಮಹಮ್ಮದನ ಚರಿತ್ರೆಯನ್ನು ನೀವು ಓದಿರುವಿರಿ ಆತನು ಹಾಳುಗೆಡವಿದ ಸೋಮನಾಥ ದೇವಾಲಯವು ಇದೇ ಸೌರಾಷ್ಟ್ರದಲ್ಲಿ, ಜುನಾಗಡದ ಹತ್ತಿರ ಸಮುದ್ರತೀರದಲ್ಲಿ ಇರುವದು ಇಂದು ಆ ದೇವಾಲಯವನ್ನು ಹೊಸದಾಗಿ ಕಟ್ಟಿಸಿರುವರು ಸಂಸ್ಕೃತ ವಿದ್ಯಾಲಯವನ್ನು ಸ್ಥಾಪಿಸಿರುವರು

## ಮಹಾರಾಷ್ಟ್ರ

ಇನ್ನು ಈ ರಾಜ್ಯದ ಮಧ್ಯಭಾಗವನ್ನು ನಿರೀಕ್ಷಿಸೋಣ. ಈ ಭಾಗದಲ್ಲಿ ಮಹಾರಾಷ್ಟ್ರದ ಹೆಚ್ಚಿನ ಭಾಗವೆಲ್ಲ ಸಮಾವೇಶವಾಗುವದು ಸಹ್ಯಾ-

ದ್ರಿಯ ಬೆಟ್ಟದ ನಾಲು ಮಹಾರಾಷ್ಟ್ರವನ್ನು ಇಬ್ಭಾಗವಾಗಿ ಮಾಡುವದು ಪಶ್ಚಿಮದ ಕರಾವಳಿಯ ಕಿರಿದಾದ ಬಯಲಿಗೆ ಕೊಂಕಣವೆಂದು ಹೇಳುವರು ತಪ್ಪಲಿನ ಪ್ರದೇಶಕ್ಕೆ ಅವರು 'ದೇಶ' ವೆಂದು ಕರೆಯುವರು ದಮಣ ಗಂಗೆಯು ಕೊಂಕಣದ ಉತ್ತರ ಸೀಮೆಯಾಗಿದೆ ನಕಾಶದಲ್ಲಿ ಮಹಾರಾಷ್ಟ್ರದ ಭಾಗವನ್ನು ನೋಡಿರಿ ನದಿಗಳು ಹೇಗೆ ಹರಿಯುವವೆಂಬುದನ್ನು ನಿರೀಕ್ಷಿಸಿರಿ ತಪ್ಪಲಿನ ಪ್ರದೇಶವು ಪೂರ್ವಕ್ಕೆ ಇಳುಕಲಾಗುತ್ತ ಹೋಗಿರುವದು. ಕೊಂಕಣ ದಿಂದ ಮೇಲಿನ ತಪ್ಪಲುಭಾಗಕ್ಕೆ ಬರಲು ಅಲ್ಲಲ್ಲಿ ಇರುವ ಕೆಲವು ಘಟ್ಟಗಳೇ ಸಾಧನವಾಗಿವೆ

ಮಹಾರಾಷ್ಟ್ರ ಜಿಲ್ಹೆಗಳ ಸ್ಥಾನ, ಸ್ವಾಭಾವಿಕ ರಚನೆಗಳ ಮೇರೆಗೆ, ಅಲ್ಲಲ್ಲಿ ಹವೆ, ಮಳೆ, ಬೆಳೆಗಳೂ ಭಿನ್ನವಾಗಿರುವವು ಕೊಂಕಣವನ್ನು ನೀವು ನೋಡಿರುವಿರಿ ಸಮುದ್ರ ಸಮೀಪವಾಗಿರುವದರಿಂದ ಅಲ್ಲಿಯ ಹವೆಯು ಸಮವಾಗಿರುವದು ಮಳೆಯೂ ಹೆಚ್ಚು. ತಪ್ಪಲಿನ ಪಶ್ಚಿಮ ಜಿಲ್ಹೆಗಳಲ್ಲಿ ಪೂರ್ವದ ಜಿಲ್ಹೆಗಳಿಗಿಂತಲೂ ಮಳೆ ಹೆಚ್ಚು ಪೂರ್ವಕ್ಕೆ ಹೋದಂತೆ ಮಳೆಯ ಪ್ರಮಾಣವು ಕಡಿಮೆಯಾಗುವದು ಪಶ್ಚಿಮ ಖಾನದೇಶದಲ್ಲಿ ಮಳೆ ಹೆಚ್ಚು ಅಲ್ಲಿ ಭತ್ತ ಬೆಳೆಯುವದು ಪೂರ್ವ ಖಾನದೇಶದಲ್ಲಿ ಮಳೆ ಕಡಿಮೆ ಅಲ್ಲಿ ಹತ್ತಿ ಬೆಳೆಯುವದು ಉಮರಾ ಜಾತಿಯ, ಉದ್ದನಾದ ಎಳೆಯುಳ್ಳ, ಶ್ರೇಷ್ಠವಾದ ಹತ್ತಿಯು ಇಲ್ಲಿ ಬೆಳೆಯುವದು

ನಕಾಶವನ್ನು ನೋಡಿರಿ ಖಾನದೇಶವನ್ನು ಬಿಟ್ಟರೆ, ಮಧ್ಯಭಾಗದ ಮಹಾರಾಷ್ಟ್ರದ ಜಿಲ್ಹೆಗಳಲ್ಲಿ ಗೋದಾ, ಭೀಮಾ ಹಾಗೂ ಕೃಷ್ಣಾ ಈ ನದಿಗಳ ಕೊಳ್ಳದ ಪ್ರದೇಶಗಳು ಇರುವವು ಗೋದಾವರಿಯ ಕೊಳ್ಳದಲ್ಲಿ ನಾಶಿಕ, ಅಹ್ಮದನಗರ ಜಿಲ್ಹೆಗಳು ಬರುವವು ಭೂಮಿಯು ಬೆಳೆಯುಳ್ಳದ್ದಾದರೂ ಮಳೆ ಕಡಿಮೆ ನೀರಾವರಿಯ ಅನುಕೂಲತೆ ಇರುವಲ್ಲಿ ಬೆಳೆಗಳ ಸಮೃದ್ಧಿಯು ಕಂಡುಬರುವದು ಅಹ್ಮದನಗರ ಜಿಲ್ಹೆಯಲ್ಲಿ ಹಣ್ಣುಹಂಪಲುಗಳನ್ನು. ನಾಶಿಕ ಜಿಲ್ಹೆಯಲ್ಲಿ ದ್ರಾಕ್ಷೆಯನ್ನು ಹೆಚ್ಚಾಗಿ ಬೆಳೆಯುವರು ಕೋಪರ ಗಾಂವದ ಸುತ್ತಲೂ ಕಬ್ಬು ಬೆಳೆಯುವದರಿಂದ ಅಲ್ಲಿ ಸಕ್ಕರೆ ಕಾರಖಾನೆ ಇರುವದು

ಭೀಮಾ ನದಿಯ ಕೊಳ್ಳವು ಎರಡನೆಯದು ಇದರಲ್ಲಿ ಅಹ್ಮದನಗರದ ಕೆಲವು ಭಾಗವಲ್ಲದೆ, ಪುಣೆ ಹಾಗೂ ಸೊಲ್ಲಾಪೂರ ಜಿಲ್ಹೆಯ ಕೆಲವು ಭಾಗ

ಗಳು ಬರುವವು ಭೀಮಾ ನದಿಗೆ ಬೇರೆ ಕೆಲವು ಉಪನದಿಗಳು ಕೂಡಿ ಕೊಂಡಿರುವವು. ಪುಣೆ ಜಿಲ್ಹೆಗೆ ಮುಳಾ, ಮುಠಾ ನದಿಗಳಿಂದ ನೀರಾವರಿಯ ಅನುಕೂಲತೆಯುಂಟು ಪುಣೆಯ ಸುತ್ತಲಿನ ಹಳ್ಳಿಗಳಲ್ಲಿ ಉತ್ತಮವಾದ




ಆಕೃತಿ ೧೫ ಮಹಾರಾಷ್ಟ್ರ

ಭತ್ತವೂ ಬೆಳೆಯುವದು. ಹಣ್ಣು-ಹಂಪಲು, ಕಾಯಿಪಲ್ಯೆಗಳೂ ವಿಪುಲ ವಾಗಿ ಬೆಳೆಯುವವು. ಆದರೆ ಸೊಲ್ಲಾಪೂರ ಜಿಲ್ಹೆಯ ಪರಿಸ್ಥಿತಿಯು ಬೇರೆ ಯಾಗಿರುವದು. ಇಲ್ಲಿ ಮಳೆಯು ಅಲ್ಪವೂ, ಅನಿಶ್ಚಿತವೂ ಆಗಿರುವದರಿಂದ

ಆಗಾಗ್ಗೆ ಬರದ ಭಯವು ಇರುವದು. ಹವೆಯೂ ಹೆಚ್ಚು ವಿಷಮವಾಗಿರುವದು ಹತ್ತಿ, ಜೋಳಗಳೇ ಇಲ್ಲಿಯ ಮುಖ್ಯವಾದ ಬೆಳೆಗಳು

ಕೊನೆಯದಾಗಿ ಕೃಷ್ಣಾನದಿಯ ಕೊಳ್ಳದ ಪ್ರದೇಶವನ್ನು ನೋಡಿರಿ ಸಾತಾರೆ ಜಿಲ್ಹೆಯೂ ಇಂದಿನ ದಕ್ಷಿಣ ಸಾತಾರೆ ಜಿಲ್ಹೆಯಾದ ಮೊದಲಿನ ಸಾಂಗಲಿ ಸಂಸ್ಥಾನದ ಹೆಚ್ಚಿನ ಭಾಗವೂ ಕೊಲ್ಹಾಪೂರ ಜಿಲ್ಹೆಯ ಕೆಲವೊಂದು ಭಾಗವೂ ಈ ಕೊಳ್ಳದಲ್ಲಿ ಸಮಾವೇಶವಾಗುವವು ಕೃಷ್ಣಾನದಿಗೆ ಕೂಡುವ ಕೊಯನಾ, ಪಂಚಗಂಗಾ ಮೊದಲಾದ ಕೆಲವು ಉಪನದಿಗಳು ಇದೇ ಭಾಗದಲ್ಲಿ ಹರಿಯುವವು ಕೃಷ್ಣಾನದಿಯ ಕೊಳ್ಳದ ಎರೆ ಭೂಮಿಯು ಬಹಳೇ ಕಸುವುಳ್ಳದ್ದು, ಒಳ್ಳೇ ಫಲವತ್ತಾದದ್ದು. ಮಳೆಯೂ ಇಲ್ಲಿ ನಾಕಷ್ಟು ಆಗುವದು ಜೋಳ, ಕಬ್ಬು, ಅರಿಶಿಣ, ತಂಬಾಕು ಹಾಗು ಕಡಲೆ, ಶೇಂಗಾ ಈ ವಿವಿಧ ಬೆಳೆಗಳನ್ನು ಈ ಭಾಗದ ಜನರು ಸಮೃದ್ಧವಾಗಿ ಬೆಳೆದುಕೊಳ್ಳುವರು ಕಬ್ಬು ಬೆಳೆಯುವ ಕೊಲ್ಹಾಪುರದಲ್ಲಿ ಸಕ್ಕರೆಯ ಕಾರಖಾನೆಯಿದೆ ನಿಪ್ಪಾಣಿಯು ತಂಬಾಕು, ಬೆಲ್ಲಗಳಿಗೆ ಹೆಸರಾಗಿರುವದು

ಇನ್ನು ಈ ಮಧ್ಯಭಾಗದಲ್ಲಿರುವ ಕೆಲವು ಮಹತ್ತ್ವದ ಪಟ್ಟಣಗಳನ್ನು ನೋಡಿಕೊಂಡು ಬರೋಣ

ನಾಸಿಕವು ಗೋದಾ ತೀರದಲ್ಲಿದೆ ನೆರೆಯಲ್ಲಿಯೇ ತ್ರ್ಯಂಬಕೇಶ್ವರವೆಂಬ ಯಾತ್ರೆಯ ಸ್ಥಳವಿದೆ ಬಳಿಯಲ್ಲಿಯೇ ರಾಮಾಯಣದಲ್ಲಿ ವರ್ಣಿಸಿರುವ ಪಂಚವಟಿಯಿರುವದು ಸಮೀಪದಲ್ಲಿರುವ ದೇವಲಾಲಿಯೆಂಬುದು ದಂಡಿನ ಬೀಡು ನಾಸಿಕದಲ್ಲಿ ಸರಕಾರದ ಮುದ್ರಣಾಲಯವಿದೆ ನೀವು ನಿತ್ಯವೂ ಉಪಯೋಗಿಸುವ ಕಾರ್ಡು ಪಾಕೀಟುಗಳೂ, ಹಣದ ನೋಟುಗಳೂ ಇಲ್ಲಿಯೇ ಅಚ್ಚಾಗಿ ಬರುವವು. ನಾಸಿಕದಲ್ಲಿ ತಾಮ್ರ, ಹಿತ್ತಾಳಿಗಳ ವಿವಿಧವಾದ ಪಾತ್ರೆಗಳನ್ನು ಮಾಡುವ ಕೈಗಾರಿಕೆಯು ಹೆಸರು ಪಡೆದಿದೆ. ನಾಸಿಕದಲ್ಲಿಯೂ, ಇದೇ ಜಿಲ್ಹೆಯಲ್ಲಿರುವ ಯೇವಲೆಯೆಂಬಲ್ಲಿಯೂ ಜರದ ಖಣ, ಪೀತಾಂಬರಗಳನ್ನು ಅಂದರವಾಗಿ ನೇಯುವರು ನಾಸಿಕದ ದ್ರಾಕ್ಷೆಗಳಂತೂ ಪ್ರಸಿದ್ಧವಾಗಿವೆ

ಪುಣೆ ಇದು ಜಿಲ್ಹೆಯ ಮುಖ್ಯ ಸ್ಥಳವು ಇದು ಮಹಾರಾಷ್ಟ್ರದ ವಿದ್ಯಾಕೇಂದ್ರವು. ಇಲ್ಲಿ ಇರುವಷ್ಟು ಶಿಕ್ಷಣ ಸಂಸ್ಥೆಗಳು ಬೇರೆ ಯಾವ ಪಟ್ಟಣದಲ್ಲಿಯೂ ಇರುವದಿಲ್ಲ ನಮ್ಮ ರಾಜ್ಯದ ಅನೇಕ ಕೇಂದ್ರ ಕಚೇರಿಗಳು

ಪುಣೆಯಲ್ಲಿ ಇರುವವು. ಸಮೀಪದ ಖಡಕಿ ಎಂಬಲ್ಲಿ* ಸೈನ್ಯದ ಬೀಡು ಇರುವದು ಇಲ್ಲಿಯ ಜನಸಂಖ್ಯೆಯು ಐದು ಲಕ್ಷದಷ್ಟು ಇರುವದು. ಮಧ್ಯ ರೇಲ್ವೆ ಹಾಗೂ ದಕ್ಷಿಣ ರೇಲ್ವೆಗಳು ಇಲ್ಲಿ ಕೂಡಿರುವವು ವಿಮಾನ ನಿಲ್ದಾಣವು ಇಲ್ಲಿರುವದು. ಪುಣೆಯ ಸಮೀಪದಲ್ಲಿ ಕಾರ್ಲಾ ಎಂಬಲ್ಲಿ ಕಲ್ಲಿನಲ್ಲಿ ಸುಂದರವಾಗಿ ಕೊರೆದ ಚೈತ್ಯಾಲಯಗಳುಂಟು ಒಂದು ಕನ್ನಡ ರಾಜಮನೆತನದ ಅರಸರೇ ಈ ಗವಿಗಳನ್ನು ಕೊರೆಯಿಸಿರುವರೆಂದು ತಿಳಿಯುತ್ತದೆ. ಪುಣೆಯಲ್ಲಿ ತಾಮ್ರ, ಹಿತ್ತಾಳೆ ಪಾತ್ರೆಗಳ, ಔಷಧಿ-ಸುಗಂಧ ದ್ರವ್ಯಗಳ ಹಾಗೂ ಇನ್ನು ಬೇರೆ ಕೈಗಾರಿಕೆಗಳ ಉದ್ಯೋಗವು ನಡೆಯುವದು ಸಮೀಪದಲ್ಲಿ ಮುಂಡವಾ ಎಂಬಲ್ಲಿ ಕಾಗದದ ಕಾರಖಾನೆಯುಂಟು

ಅಹ್ಮದನಗರವು ಜಿಲ್ಹೆಯ ಮುಖ್ಯ ಸ್ಥಳವು ಇತಿಹಾಸದಲ್ಲಿ ನೀವು ಓದಿದ ಚಾಂದಬೀಬಿಯ ಪೂರ್ವದ ರಾಜಧಾನಿಯಾಗಿರುವದು ಅವಳ ಕಾಲದ ಒಂದು ಹಳೆಯ ಅರಮನೆಯನ್ನು ಈಗಲೂ ನೀವು ನೋಡಬಹುದು. ಇದೇ ಜಿಲ್ಹೆಯಲ್ಲಿ ಪ್ರವರಾ ನದಿಯ ನೀರಾವರಿಯಿಂದ ಕಬ್ಬು ಬೆಳೆಯುವರು ಬೇಲಾಪೂರ ಎಂಬಲ್ಲಿ ಸಕ್ಕರೆಯ ಕಾರಖಾನೆಯಿರುವದು

ಸಾತಾರೆ ಇದು ಜಿಲ್ಹೆಯ ಮುಖ್ಯ ಸ್ಥಳವು ಛತ್ರಪತಿ ರಾಜಮನೆತನದ ಮೂಲ ನಿವಾಸವು. ಅವರ ಕಾಲದ ಹಳೆಯ ಅರಮನೆ ಮೊದಲಾದವುಗಳು ಇಲ್ಲಿ ಇರುವವು. ಇಲ್ಲಿ ವೈದ್ಯಕೀ ಶಾಲೆಯೂ, ಕಬ್ಬಿಣದ ಕಾರಖಾನೆಯೂ ಇರುವವು ಸಮೀಪದಲ್ಲಿ ಶ್ರೀಸಮರ್ಥರ ಸಜ್ಜನಗಡ ಕಿಲ್ಲೆ ಇರುವದು. ಮಹಾಬಳೇಶ್ವರವು ಇಲ್ಲಿಂದ ದೂರವಾಗಿಲ್ಲ. ಮಹಾಬಳೇಶ್ವರವು ಕೃಷ್ಣೆಯ ಉಗಮ ಸ್ಥಾನವು ಬೇಸಿಗೆಯಲ್ಲಿ ತಂಪು ಸ್ಥಳವು. ಸರಕಾರದ ಕೃಪೆಯಿಂದ ಶಾಲೆಯ ವಿದ್ಯಾರ್ಥಿಗಳೂ, ಶಿಕ್ಷಕರೂ ಬೇಸಿಗೆಯಲ್ಲಿ ವಿಶ್ರಾಂತಿಪಡೆಯುಬಹುದಾಗಿದೆ. ಇದೇ ಜಿಲ್ಹೆಯ ಕರ್ಹಾಡದಲ್ಲಿ ಕಡ್ಡೀಪೆಟ್ಟಿಗೆಯ ಕಾರಖಾನೆಯಿರುವದು. ಓಗಲೇವಾಡಿಯಲ್ಲಿ ಕಾಜಿನ ಕಾರಖಾನೆ, ಕಿರ್ಲೋಸ್ಕರವಾಡಿಯಲ್ಲಿ ಕಬ್ಬಿಣದ ಕಾರಖಾನೆಗಳು ಒಳ್ಳೇ ಊರ್ಜಿತ ಸ್ಥಿತಿಯಲ್ಲಿರುವವು. ಫಲಟಣದಲ್ಲಿ ಸಕ್ಕರೆಯ ಕಾರಖಾನೆ ಇರುವದು

ಸೊಲ್ಲಾಪೂರ—ಇದು ಜಿಲ್ಹೆಯ ಮುಖ್ಯ ಸ್ಥಳವು ಇದು ಶ್ರೀಸಿದ್ಧರಾಮೇಶ್ವರನ ಕ್ಷೇತ್ರವು. ಇದರ ಮೊದಲಿನ ಹೆಸರು ಸೊನ್ನಲಾಪುರವೆಂಬುದು. ಇಂದು ಇದು ಬಟ್ಟೆಯ ಉದ್ಯೋಗದ ಕೇಂದ್ರವಾಗಿದೆ.

ದಕ್ಷಿಣ ಹಾಗೂ ಮಧ್ಯ ರೇಲ್ವೆಗಳು ಇಲ್ಲಿ ಕೂಡುವವು ಇವೆರಡು ಕಾರಣ ಗಳಿಂದ ಈ ಪಟ್ಟಣವು ಬೆಳೆದಿದೆ ಇದೇ ಜಿಲ್ಹೆಯಲ್ಲಿ ಪಂಢರಪುರವು ಶ್ರೀ ಪಾಂಡುರಂಗನ ಕ್ಷೇತ್ರವು ಆಷಾಢ, ಕಾರ್ತಿಕಗಳಲ್ಲಿ ಅಸಂಖ್ಯ ಜನರು ಇಲ್ಲಿ ಬರುವರು ಇಲ್ಲಿ ಭೀಮಾ ನದಿಯು ಅರ್ಧಚಂದ್ರನ ಆಕಾರ ದಲ್ಲಿ ಹರಿಯುವದು ಅದಕ್ಕೆ 'ಚಂದ್ರಭಾಗಾ' ಎಂದು ಹೇಳುವರು. ಸೊಲ್ಲಾಪೂರದ ಸಮೀಪದಲ್ಲಿ ಟಿಕೇಕರವಾಡಿಯೆಂಬ ಹೊಸದೊಂದು ಊರು ಬೆಳೆಯಹತ್ತಿದೆ ಇಲ್ಲಿ ಕಬ್ಬಿಣ, ತಾಮ್ರಗಳ ಕಾರಖಾನೆಯಿರು ವದು ಸೀರೆ ನೇಯುವ ಉದ್ಯೋಗವು ನಡೆಯುವದು. ವಾಲಚಂದ ನಗರ ದಲ್ಲಿ ಸಕ್ಕರೆಯ ದೊಡ್ಡ ಕಾರಖಾನೆಯಿರುವದು

ಹಿಂದಿನ ಸಾಂಗಲಿ ಸಂಸ್ಥಾನದ ಒಂದು ದೊಡ್ಡ ಭಾಗವೂ ಸುತ್ತಲಿನ ಕೆಲವು ಪ್ರದೇಶವೂ ಕೂಡಿಕೊಂಡು ಇಂದು ದಕ್ಷಿಣ ಸಾತಾರೆಯಾಗಿದೆ ಸಾಂಗ ಲಿಯೇ ಮುಖ್ಯ ನಗರವು ಇಲ್ಲಿ ತಾಮ್ರ ಹಿತ್ತಾಳೆಗಳ ಪಾತ್ರೆಗಳಾಗುವವು. ಬೆಲ್ಲ, ಅರಿಶಿಣ, ತಂಬಾಕುಗಳ ವ್ಯಾಪಾರಕ್ಕೆ ಇದು ಪಡುಮೂಲೆಯಾಗಿದೆ, ಮಿರಜವು ರೇಲ್ವೆ ಜಂಕ್ಶನ್‌ವಾಗಿದೆ. ಇಲ್ಲಿಯ ಮಿಶನ್ ಆಸ್ಪತ್ರೆ, ಕ್ಷಯರೋಗ ಸಂಸ್ಥೆಗಳು ಹೆಸರಾಗಿವೆ ಸಾಂಗಲಿ, ಈಚಲಕರಂಜಿ ಎರಡರಲ್ಲಿಯೂ ಹೊಸ ಮಾದರಿಯ ಲೋಕಪ್ರಿಯವಾದ ಸೀರೆಗಳನ್ನು ತಯಾರಿಸುವರು

ಕೊಲ್ಹಾಪುರವು ಹಿಂದೆ ಸಂಸ್ಥಾನದ ರಾಜಧಾನಿಯಾಗಿದ್ದು ಇಂದು ಜಿಲ್ಹೆಯ ಮುಖ್ಯಸ್ಥಳವಾಗಿದೆ ಇಲ್ಲಿಯೂ ಅನೇಕ ಶಿಕ್ಷಣ ಸಂಸ್ಥೆಗಳಿರುವವು ಇದು ಶ್ರೀ ಮಹಾಲಕ್ಷ್ಮಿಯ ಕ್ಷೇತ್ರವಾಗಿದೆ ಒಂದು ಶಾಖಾ ರೇಲ್ವೆಯಿಂದ ಮಿರಜಕ್ಕೆ ಜೋಡಿಸಲ್ಪಟ್ಟಿದೆ ಬೆಲ್ಲ ತಂಬಾಕುಗಳ ವ್ಯಾಪಾರಕ್ಕೆ ಕೇಂದ್ರ ವಾಗಿದೆ ಸಕ್ಕರೆಯ ಕಾರಖಾನೆಯೂ ಇಲ್ಲಿ ಇರುವದು

ಜಳಗಾಂವ—ಇದು ಪೂರ್ವ ಖಾನದೇಶದ ಮುಖ್ಯ ಸ್ಥಳವು ನೂಲಿನ ಗಿರಣಿಗಳು ಇಲ್ಲಿ ಇರುವವು ಅಮ್ಮಳನೇರದಲ್ಲಿ ಬಟ್ಟೆಯ ಗಿರಣಿಗಳು ಕೂಡ ಇರುವವು, ಭುಸಾವಳ ಇದು ರೇಲ್ವೇ ಜಂಕ್ಶನ್ ಹಾಗೂ ಇಲ್ಲಿ ರೇಲ್ವೆಯ ದೊಡ್ಡ ಕಾರಖಾನೆಯೂ ಇರುವದು ಖಾನದೇಶವು ಶ್ರೀ ಸಾನೆ ಗುರೂಜಿಯವರ ಕಾರ್ಯಕ್ಷೇತ್ರವಾಗಿತ್ತು

## ಕೊಂಕಣದ ಜಿಲ್ಹೆಗಳು

ಕಿರಿಯಗಲಾದ ಈ ಕರಾವಳಿಯ ಪಟ್ಟಿಯ ಭೂರಚನೆಯನ್ನೂ ಇನ್ನೂ ಕೆಲವು ಸಂಗತಿಗಳನ್ನೂ ಈಗಾಗಲೆ ನೀವು ತಿಳಿದುಕೊಂಡಿರುವಿರಿ ಕೊಂಕಣದ

ಜಿಲ್ಹೆಗಳನ್ನು ಸಂದರ್ಶಿಸಲು ಚಳಿಗಾಲವೇ ಒಳ್ಳೇ ಸಮಯ. ಮಳೆಗಾಲದ ಮಳೆಯು ನಿಮಗೆ ಹೊರಗೆ ಹೋಗಗೊಡುವದಿಲ್ಲ ಬೇಸಿಗೆಯ ಉಗಿ ಕೂಡಿದ ಬಿಸಿಲು ನಿಮ್ಮನ್ನು ಬೆಮರಿಸಿ ನಿರ್ವಿಣ್ಣರನ್ನಾಗಿ ಮಾಡುವದು. ಚಳಿಗಾಲವು ಮಾತ್ರ ಆಲ್ಹಾದಕರವಾಗಿರುವದು. ಇಲ್ಲಿ ನಿಮಗೆ ಜೋಳ, ಗೋದಿಗಳ ರೊಟ್ಟಿ ದೊರೆಯಲಾರದು ಹಾಲು ಹೈನವೂ ಕಡಿಮೆ ಅಕ್ಕಿ, ಕಾಯಿಪಲ್ಯೆ, ಹಣ್ಣುಹಂಪಲುಗಳು, ತೆಂಗು ಹಾಗು ಮೀನ–ಇವುಗಳನ್ನು ನೀವು ಯಥೇಚ್ಛವಾಗಿ ತೆಗೆದುಕೊಳ್ಳಬಹುದು ಈ ಜಿಲ್ಹೆಗಳಲ್ಲಿ ಕೆಲವು ಊರುಗಳನ್ನು ನೋಡಿಕೊಂಡು ಬರೋಣ. ಇಲ್ಲಿ ನಿಮಗೆ ಮುಂಬಯಿ, ಅಹ್ಮದಾಬಾದದಂಥ ಊರುಗಳನ್ನು ನೋಡಲು ಸಿಗದು. ಅಲೀಬಾಗ ಇದು ಕುಲಾಬಾ ಜಿಲ್ಹೆಯ ಮುಖ್ಯ ಸ್ಥಳವು. ಇಲ್ಲಿ ದೀಪಸ್ತಂಭವಿದೆ ಆಯುರ್ವೇದದ ಔಷಧಗಳು ಪನವೇಲದಲ್ಲಿ ಸಿದ್ಧವಾಗುವವು. ರಾಯಗಡ ಪ್ರತಾಪಗಡ ಇವು ಸಹ್ಯಾದ್ರಿಯ ಶಿಖರಗಳ ಮೇಲೆ ಕಟ್ಟಿರುವ ಮರಾಠಾ ರಾಜ್ಯದ ಕೋಟೆಗಳಲ್ಲಿ ಕೆಲವು.

**ಠಾಣಾ**— ಇದು ಜಿಲ್ಹೆಯ ಮುಖ್ಯ ಸ್ಥಳವು. ಕಲ್ಯಾಣದ ವರೆಗೆ ಮುಂಬಯಿಯಿಂದ ಲೋಕಲ್‌ಗಾಡಿಗಳು ಹೋಗಿಬರುವವು ಮುಂಬಯಿಯಲ್ಲಿ ಕೆಲಸ ಮಾಡುವ ಎಷ್ಟೋ ಜನರು ಇಲ್ಲಿ ಮನೆಮಾಡಿಕೊಂಡಿರುವರು. 'ವಿಹಾರ'ದ ಕೆರೆಯು ಮುಂಬಯಿಗೆ ನೀರನ್ನು ಪೂರೈಸುವದು ಕಾನೇರಿಯಲ್ಲಿ ಗುಡ್ಡದಲ್ಲಿ ಕೊರೆದು ಮಾಡಿದ ಪ್ರಾಚೀನ ಗವಿಗಳುಂಟು.

**ರತ್ನಾಗಿರಿ**— ಇದು ಜಿಲ್ಹೆಯ ಮುಖ್ಯ ಸ್ಥಳವು. ಇಲ್ಲಿಂದ ಮಾವಿನ ಹಣ್ಣುಗಳು ಪರದೇಶಕ್ಕೆ ಹೋಗುವವು. ರಾಜಾಪೂರವು ವ್ಯಾಪಾರದ ಕೇಂದ್ರವು ತೆಂಗು ಇಲ್ಲಿಂದ ಹೊರಗೆ ಹೋಗುವದು. ಇಲ್ಲಿ ಗಂಗಾ ನದಿಯು ವರ್ಷಕ್ಕೊಮ್ಮೆ ಪ್ರಕಟವಾಗುವದೆಂದು ಭಾವಿಕರ ನಂಬುಗೆ. ಸಾವಂತವಾಡಿಯಲ್ಲಿ ಬಣ್ಣದ ಸುಂದರವಾದ ಕಟ್ಟಿಗೆಯ ಸಾಮಾನುಗಳಾಗುವವು. ಸೀರೆಗಳೂ ಇಲ್ಲಿ ತಯಾರಾಗುವವು

**ಮುಂಬಯಿ**— ಇದು ರಾಜ್ಯದ ರಾಜಧಾನಿ ಭಾರತದ ಹೆಬ್ಬಾಗಿಲು, ಭಾರತದ ದೊಡ್ಡ ನಗರಗಳಲ್ಲಿ ಒಂದು. ಜಗತ್ತಿನ ಅತ್ಯುತ್ತಮ ಬಂದರಗಳಲ್ಲಿಯೂ ಒಂದಾಗಿದೆ

ಬ್ರಿಟಿಶರ ಆಳಿಕೆಯ ಪೂರ್ವದಲ್ಲಿ, ಮುಂಬಯಿಯು ಸಮುದ್ರ ದಂಡೆಯ ಒಂದು ಚಿಕ್ಕ ಹಳ್ಳಿಯಾಗಿತ್ತು. ೬–೭ ಚಿಕ್ಕ ನಡುಗಡ್ಡೆಗಳಿಂದ

ಕೂಡಿದ ಇದೊಂದು ಜವುಳು ಪ್ರದೇಶವಿತ್ತು. ಇಲ್ಲಿ ಹೆಚ್ಚಾಗಿ ಮೀನ ಗಾರರು ವಾಸಿಸುತ್ತಿದ್ದರು ಪೋರ್ತುಗೀಜ ವ್ಯಾಪಾರಸ್ಥರು ಈ ಹಳ್ಳಿಯ ಸ್ಥಾನ ಸ್ವರೂಪಗಳನ್ನು ನಿರೀಕ್ಷಿಸಿದರು. ಅದನ್ನು ಅನಾಯಾಸವಾಗಿ ವಶಪಡಿಸಿ ಕೊಂಡರು. ಮುಂದೆ ಮೀನಗಾರರ ಈ ಹಳ್ಳಿಯು ಇಂಗ್ಲಂಡದ ಅರಸ ನಿಗೆ ವರದಕ್ಷಿಣೆಯ ಭಾಗವಾಗಿ ದೊರೆಯಿತು ಇಂಗ್ಲಂಡದ ವರ್ತಕರು ಇದರ ಮಹತಿಯನ್ನು ಕೂಡಲೆ ತಿಳಿದುಕೊಂಡರು ಸರಿಯಾಗಿ ವಿಕಾಸಗೊಳಿ ಸಿದರೆ ಇದೇ ಹಳ್ಳಿಯು ಶ್ರೇಷ್ಠವಾದ ಬಂದರವಾಗುವದೆಂಬುದು ಅವರಿಗೆ ಮನವರಿಕೆಯಾಯಿತು ಮುಂಬಯಿಯ ಸ್ವಾಭಾವಿಕ ಸ್ವರೂಪವೇ ಹೀಗಿರು ವದು. ರಾಣೆಯ ಆಳವಾದ ಹಾಗೂ ಅಗಲವಾದ ಸಮುದ್ರದ ಒತ್ತು ಹಡಗಗಳಿಗೆ ಸುರಕ್ಷಿತವಾದ ಬಂದರವಾಗಿದೆ ತೆರೆಗಳ ತಾಕಲಾಟವಿಲ್ಲ. ಬಿರುಗಾಳಿಗಳ ಭಯವಿಲ್ಲ ಹಡಗುಗಳು ತಂಗಲು ಬೇಕಾದಷ್ಟು ವಿಶಾಲ ವಾದ ಬಂದರ ಪ್ರದೇಶವಿದೆ ಈ ಸ್ವಾಭಾವಿಕ ಸ್ವರೂಪದಂತೆ ಮುಂಬಯಿಯ ಸ್ಥಾನವೂ ಅಷ್ಟೇ ಆಯಕಟ್ಟಿನದಾಗಿದೆ ಯುರೋಪದ ರಾಷ್ಟ್ರಗಳಿಗೆ ಇದು ಸಮೀಪವಾದ ಬಂದರ ಸುತ್ತಲೂ ಹತ್ತಿ ಬೆಳೆಯುವ ಫಲವತ್ತಾದ ಸೀಮೆ ಕೆಲವಾರು ವರುಷಗಳಲ್ಲಿಯೇ ಮುಂಬಯಿಯ ವ್ಯಾಪಾರವು ಬೆಳೆ ಯಿತು. ಗಿರಣಿಗಳ ಸ್ಥಾಪನೆಯಾಯಿತು ಇದು ಇಂದು ಬಟ್ಟೆಯ ಗಿರಣಿ ಗಳ ಕೇಂದ್ರವಾಗಿದೆ. ಭಾರತವು ಪರದೇಶಗಳೊಡನೆ ನಡೆಸುವ ವ್ಯಾಪಾರದ ಪಡಮೂಲೆಯಾಗಿದೆ ಅನೇಕ ಉದ್ಯೋಗಗಳಿಗೆ ಆಸರವಾಗಿದೆ ಮೂವತ್ತು ಲಕ್ಷಗಳಿಗೆ ಮಿಕ್ಕಿದ ಜನರಿಗೆ ಆಶ್ರಯವಿತ್ತಿದೆ

ಮುಂಬಯಿ ಘನತೆಗೆ ತಕ್ಕಂತೆ, ಆ ನಗರದ ರಚನೆಯೂ ಭವ್ಯವಾಗಿದೆ, ರಮಣೀಯವಾಗಿದೆ. ಮುಂಬಯಿಗೆ ನಡೆಯಿರಿ ನಿಮಗೆ ಕಾಣುವದೇನು? ವಿಶಾಲವಾದ ರಾಜಬೀದಿಗಳು, ತೆರಪಿಲ್ಲದೆ ಓಡಾಡುವ ಟ್ರಾಮು, ಮೋಟಾರು, ವಿವಿಧ ವಾಹನಗಳು, ಇಬ್ಬದಿಗಳಲ್ಲಿ ಏಳೆಂಟು ಅಂತಸ್ತಿನ ಉಪ್ಪರಿಗೆಗಳು; ಕಣ್ಣು ಕುಕ್ಕಿಸುವ ದೀಪಗಳು, ಜೀವನಕ್ಕಾಗಿ ಬಿಡುವಿಲ್ಲದೆ ಓಡಾಡುವ ಜನರ ಗುಂಪು, ಮನಸ್ಸನ್ನು ಸೆಳೆಯುವ ಸಾಲುಸಾಲಾದ ಅಂಗಡಿಗಳು

ಮುಂಬಯಿಯಲ್ಲಿ ಸ್ವರ್ಗ—ನರಕಗಳೆರಡನ್ನೂ ನೀವು ಕಾಣಬಹುದು ಒಂದೆಡೆ ಶ್ರೀಮಂತರ ಅರಮನೆಗಳು, ನಗರೋದ್ಯಾನಗಳು, ವಸ್ತುಸಂಗ್ರಹಾ ಲಯ—ಪ್ರಾಣಿ ಸಂಗ್ರಹಾಲಯಗಳು, ಹಾಗೂ ಸಿನೇಮಾ ಮಂದಿರಗಳು ಇತ್ತ ಕಡೆಗೆ ಬನ್ನಿರಿ ಇದು ಕೂಲಿಕಾರರಿರುವ ಭಾಗ. ಹೊಲಸು ಕೊಳಚೆ,

ಗಾಳಿ ಬೆಳಕುಗಳಿಲ್ಲದ, ಕಾಲುಚಾಚಲೂ ಬಾರದ ಇಕ್ಕಟ್ಟಾದ ಗುಡಿಸಲಿನಂಥ ಮನೆಗಳು.

ಗಾಲಿಯ ಗಡ್ಡೆಯಂತೆ—ಭೂ, ಜಲ, ಹಾಗೂ ವಾಯುಮಾರ್ಗಗಳೆಲ್ಲವೂ ಮುಂಬಯಿಗೆ ಬಂದು ಕೂಡುವವು. ಮುಂಬಯಿ ನಗರದಲ್ಲಿ ಎಲ್ಲ ರಾಷ್ಟ್ರಗಳ ನಾಗರಿಕರನ್ನು ಕಾಣುವಂತೆ, ಮುಂಬಯಿ ಬಂದರದಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳ ಹಡಗುಗಳನ್ನು ನೀವು ನೋಡಬಹುದು. 'ಕ್ರೇನು' ಯಂತ್ರಗಳ ಸಹಾಯದಿಂದ ಭಾರವಾದ ವಸ್ತುಗಳನ್ನು ಹಡಗುಗಳಲ್ಲಿ ಏರಿಸುವದು—ಇಳಿಸುವದು ಒಳ್ಳೇ ಕೌತುಕದ ಸಂಗತಿಯಾಗಿದೆ. ಇಲ್ಲಿ ಅಸಂಖ್ಯ ಕೂಲಿ ಜನರು ಕೆಲಸ ಮಾಡುವರು. ಮುಂಬಯಿ ನಗರದಲ್ಲಿಯೂ ಅನೇಕ ಕನ್ನಡಿಗರು ಕೆಲಸ ಮಾಡುವರು. ಭಾಷೆ, ಜನಾಂಗ, ಉದ್ಯೋಗಗಳಲ್ಲಿ ಮುಂಬಯಿಯು ಸಮ್ಮಿಶ್ರ ನಗರವಾಗಿದೆ

ಮುಂಬಯಿಯ ಉಪನಗರಗಳಾದ ಜುಹು, ಸಾಂತಾಕ್ರೂಝು ಎಂಬಲ್ಲಿ ವಿಶಾಲವಾದ ವಿಮಾನ ನಿಲ್ದಾಣಗಳಿವೆ. ಇಲ್ಲಿಂದ ದೇಶದ ಬೇರೆ ಬೇರೆ ಭಾಗಗಳಿಗೂ, ಪರದೇಶಗಳಿಗೂ ವಿಮಾನಗಳು ಹೋಗುವವು.

## ದಕ್ಷಿಣಭಾಗ (ಮುಂಬಯಿ-ಕರ್ನಾಟಕ)

ಮುಂಬಯಿ ರಾಜ್ಯದ ಮುಕ್ಕಾಲು ಪ್ರದೇಶಗಳಲ್ಲಿ ನೀವು ಈಗ್ಗೆ ಸಂಚರಿಸಿದಂತಾಯಿತು ಉತ್ತರದ ಗುಜರಾಥವಾಯಿತು. ಮಧ್ಯದ ಮಹಾರಾಷ್ಟ್ರವಾಯಿತು. ಇನ್ನು ಮನೆಯ ಕಡೆಗೆ ತಿರುಗೋಣ ಮುಂಬಯಿ ರಾಜ್ಯದ ದಕ್ಷಿಣ ಭಾಗವನ್ನಷ್ಟು ನೋಡಿಕೊಂಡು ಬರೋಣ. ದಕ್ಷಿಣ ಭಾಗವೆಲ್ಲ ಕರ್ನಾಟಕದಲ್ಲಿ ಬರುವದು. ನಿಜವಾದ ಕರ್ನಾಟಕವು—ಮುಂಬಯಿ, ಮದ್ರಾಸ, ಮೈಸೂರು, ಹೈದರಾಬಾದ, ಕೊಡಗು—ಈ ರಾಜ್ಯಗಳಲ್ಲಿ ಹರಿದು ಹಂಚಿ ಹೋಗಿದೆ. ಈ ಭಾಗಗಳನ್ನೆಲ್ಲ ಒಂದುಗೂಡಿಸಿದ ಪ್ರತ್ಯೇಕ ಕರ್ನಾಟಕ ರಾಜ್ಯವು ತೀವ್ರದಲ್ಲಿಯೇ ಆಗಲಿರುವದು. ಇಂದು ನಾವು ನೋಡಿಕೊಂಡು ಬರುವದು, ಮುಂಬಯಿ ರಾಜ್ಯದೊಳಗಿನ ಬೆಳಗಾಂವಿ, ಧಾರವಾಡ, ಕಾರವಾರ, ವಿಜಾಪೂರಗಳೆಂಬ ಕೆಲವು ಕನ್ನಡ ಜಿಲ್ಹೆಗಳು. ಇವುಗಳಿಗೆಲ್ಲ ಕೂಡಿ "ಮುಂಬಯಿ ಕರ್ನಾಟಕ"ವೆನ್ನುವರು.

ಈ ನಾಲ್ಕು ಜಿಲ್ಹೆಗಳಲ್ಲಿ ಕಾರವಾರವು ಕೊಂಕಣಪಟ್ಟಿಯ ಒಂದು ಭಾಗವಾಗಿದೆ. ಉಳಿದ ಮೂರು ಜಿಲ್ಹೆಗಳು ದಕ್ಷಿಣ—ತಪ್ಪಲಿನ ಪ್ರದೇಶದಲ್ಲಿ

ಬರುವವು ಕೊಂಕಣದ ಹಾಗೂ ತಪ್ಪಲಿನ ಭೂರಚನೆ, ಹವೆ-ಮಳೆ-ಬೆಳೆಗಳ ಬಗ್ಗೆ, ಗಿರಿ-ನದಿಗಳ ಬಗ್ಗೆ ನೀವು ಈಗಾಗಲೆ ಸಾಕಷ್ಟು ತಿಳಿದುಕೊಂಡಿರುವಿರಿ.

ಆಕೃತಿ ೧೬ ಮುಂಬಯಿ ಕರ್ನಾಟಕ

## ಕಾರವಾರ ಜಿಲ್ಲೆ

ಕಾರವಾರವು ಉಳಿದ ಮೂರು ಜಿಲ್ಲೆಗಳಿಂದ ಎಲ್ಲ ರೀತಿಯಲ್ಲಿಯೂ ಭಿನ್ನವಾಗಿರುವದು ಕರಾವಳಿಯ ಆದ್ರ್ರವಾದ ಸಮ ಹವೆ ವಿಪುಲವಾದ ಮಳೆ. ಸಮುದ್ರದ ಅಂಚಿನ ಉಸುಕಿನ ಸಮ ಭೂಮಿ ಮುಂದೆ ಕಾಲು ಚಾಚಿದ ಸಹ್ಯಗಿರಿಯ ಸಾಲು ನೋಡಿದಲ್ಲೆಲ್ಲ ಭತ್ತ, ಕಬ್ಬುಗಳ ತುಂಡು ಗದ್ದೆಗಳು. ತೆಂಗು ಅಡಿಕೆಗಳ ಬನಗಳು ಬಾಳೆ, ಮಾವು, ಹಲಸು, ಗೋಡಂಬಿ—ಇವುಗಳ ಗಿಡಗಳು ಒಕ್ಕಲುತನ, ಕೈಗಾರಿಕೆ ಹಾಗೂ ಮೀನಗಾರಿಕೆ ಗಳೇ ಮುಖ್ಯವಾದ ಉದ್ಯೋಗಗಳು ಬೆಟ್ಟದಿಂದ ಕೆಳಕ್ಕೆ ನುಗ್ಗುವ ಕಾಳೀ, ಶರಾವತಿ, ಗಂಗಾವಳೀ, ಅಘನಾಶಿನೀ ಮೊದಲಾದ ನದಿಗಳು. ಶರಾವತಿಯು

ಗೆರಸೊಪ್ಪೆಯ ಹತ್ತಿರ ಅದ್ಭುತವಾದ ತಡಸಲನ್ನು ಮಾಡಿರುವದು ಇದಕ್ಕೆ ಜೋಗದ ಜಲಪಾತವೆನ್ನುವರು



ಆಕೃತಿ ೧೭ ಭತ್ತವನ್ನು ಬಿತ್ತುವದು

ಈ ಜಿಲ್ಹೆಯಲ್ಲಿ ಸಹ್ಯಾದ್ರಿಯ ಕೆಲವು ಶಿಖರಗಳುಂಟು. ಅವುಗಳಲ್ಲಿ ಅಂಕೋಲೆಯ ' ಮೋತಿಗುಡ್ಡ ', ಹೊನ್ನಾವರದ ' ಕಳಲೇಗುಡ್ಡ ' ಇವು ಎತ್ತರವಾದವುಗಳು ಸದಾಶಿವಗಡ, ಭಟಕಳ ಮೊದಲಾದ ಗಿರಿದುರ್ಗಗಳೂ ಕಂಡುಬರುವವು

ಕಾರವಾರವು ಈ ಜಿಲ್ಹೆಯ ಮುಖ್ಯ ಸ್ಥಳವು ಚಿಕ್ಕದಾದರೂ ಸುಂದರ ವಾದ ಬಂದರವು. ಕೆಲವು ಅಂತರದಲ್ಲಿ ದೇವಗಡ ಎಂಬ ನಡುಗಡ್ಡೆಯಲ್ಲಿ ದೀಪಸ್ತಂಭವಿರುವದು ಸುತ್ತಲೂ ತಿರುಗುವ ಬೆಳಕು ಎಷ್ಟೋ ಮೈಲು ದೂರದಲ್ಲಿ ಸಂಚರಿಸುವ ಹಡಗುಗಳಿಗೆ ಮಾರ್ಗದರ್ಶನ ಮಾಡುವದು ಕಾಳೀ ನದಿಯು ಸಮುದ್ರಕ್ಕೆ ಇಲ್ಲಿಯೇ ಕೂಡಿರುವದು ಅದರ ಮುಖದಲ್ಲಿರುವ ಸೃಷ್ಟಿಯ ಸೊಬಗು ಕವಿ ರವೀಂದ್ರರ ಮೆಚ್ಚುಗೆಯನ್ನು ಪಡೆದಿರುವದು. ಅಂಕೋಲೆಯ 'ಈಶಾಡೀ' ಮಾವಿನ ಹಣ್ಣು, ಗೋಡಂಬೆ ಪ್ರಸಿದ್ಧವಾದವು ಗಳು. ಈ ಮಾವಿನ ಹಣ್ಣಿನ ರಸವನ್ನು ಕೆಡದಂತೆ ಡಬ್ಬಿಗಳಲ್ಲಿ ಹಾಕಿ ಹೊರ ದೇಶಗಳಿಗೂ ಕಳಿಸುವರು ಗೋಕರ್ಣದ ಮಹಾಬಲೇಶ್ವರನ ಸ್ಥಾನವು ಜ್ಯೋತಿರ್ಲಿಂಗಗಳಲ್ಲಿ ಒಂದಾಗಿದೆ ಈ ಕ್ಷೇತ್ರವನ್ನು ಭೂಕೈಲಾಸವೆಂದು ವರ್ಣಿಸಿರುವರು ಸಾಣೇಕಟ್ಟೆಯಲ್ಲಿ ನೀವು ಉಪ್ಪಿನ ಮಾಳಗಳನ್ನು ನೋಡು ವಿರಿ. ಹೊನ್ನಾವರದಲ್ಲಿ ಶ್ರೀಗಂಧ, ಹಸ್ತಿದಂತಗಳಲ್ಲಿ ಸುಂದರವಾದ ಕೆತ್ತ ನೆಯ ಕೈಗಾರಿಕೆಯು ಇನ್ನೂ ಬದುಕಿ ಉಳಿದಿದೆ. ಭಟಕಳವು ವಿಜಯನಗರದ

ಕಾಲದಲ್ಲಿ ಹೆಸರಾದ ಬಂದರವಾಗಿತ್ತು ಇಂದು ಅದನ್ನು ಊರ್ಜಿತಗೊಳಿಸುವ ಯತ್ನ ನಡೆತಿದೆ. ಸ್ವತಂತ್ರ ಕರ್ನಾಟಕಕ್ಕೆ ಅದೊಂದು ಶ್ರೇಷ್ಠವಾದ ಬಂದರವಾಗುವಂತಿದೆ ಶಿರಸಿ ಇದು ಘಟ್ಟದ ಹುಟ್ಟುವಳಿಗೆ ಮುಖ್ಯ ವ್ಯಾಪಾರ ಕೇಂದ್ರವಾಗಿದೆ. ಅಡಿಕೆ, ಯಾಲಕ್ಕಿ, ಮೆಣಸು ಇವು ಇಲ್ಲಿಯ ವ್ಯಾಪಾರದ ಮುಖ್ಯ ವಸ್ತುಗಳಾಗಿವೆ ಸಮೀಪದಲ್ಲಿ ಎರಡು ಹಳೆಯ ರಾಜ-ಧಾನಿಗಳಿವೆ. ಬನವಸೆಯು ಕದಂಬರ ರಾಜಧಾನಿಯಾಗಿತ್ತು. ಆದಿಪಂಪನೆಂಬ ಕವಿಯು ಬನವಸೆಯನ್ನು ಬಾಯಿತುಂಬ ಹೊಗಳಿರುವನು. ಸೋದೆ ಅಥವಾ ಸ್ವಾದಿಯ ಅರಸರು ಹಿಂದಕ್ಕೆ ೨೦೦ ವರುಷಗಳ ವರೆಗೆ ಸ್ವತಂತ್ರರಾಗಿ ಆಳಿರುವರು ಜೈನ ಹಾಗೂ ವೈಷ್ಣವರಿಬ್ಬರಿಗೂ ಸ್ವಾದಿಯು ಯಾತ್ರೆಯ ಸ್ಥಳವಾಗಿದೆ. ಉಳವಿಯು ಚೆನ್ನಬಸವೇಶ್ವರನ ಪ್ರಸಿದ್ಧವಾದ ಯಾತ್ರೆಯ ಸ್ಥಳವು ದಾಂಡೇಲಿಯು ಕಟ್ಟಿಗೆಯ ವ್ಯಾಪಾರದ ಕೇಂದ್ರವಾಗಿದೆ ಬೆಳವಲನಾಡಿನ ಜನರು ಇಲ್ಲಿಗೆ ಬಂದು ಸಾಗವಾನಿಯ ತೊಲೆಗಳನ್ನು ತೆಗೆದುಕೊಂಡು ಹೋಗುವರು



ಆಕೃತಿ ೧೮ ಗೋಕರ್ಣ ಮಹಾಬಲೇಶ್ವರನ ದೇವಾಲಯ



ಆಕೃತಿ ೧೯ ಸಾಣೀಕಟ್ಟೆ ಉಪ್ಪಿನ ಮಾಳಗಳು

## ಬೆಳಗಾವಿ ಜಿಲ್ಹೆ

ಬೆಳಗಾವಿಯು ಕರ್ನಾಟಕದ ಗಡಿನಾಡು. ಪೂರ್ವಕ್ಕೆ ವಿಜಾಪುರ ಜಿಲ್ಹೆಗೆ ಹೊಂದಿಕೊಂಡಿರುವದು. ದಕ್ಷಿಣಕ್ಕೆ ಕಾರವಾರ-ಧಾರವಾಡ ಜಿಲ್ಹೆಗಳಿವೆ ಉಳಿದ ಎರಡು ದಿಕ್ಕುಗಳಲ್ಲಿ ಮಹಾರಾಷ್ಟ್ರದ ಸೀಮೆಗಳಿರುವವು ಸಹ್ಯಾದ್ರಿಯ ಇಳುಕಲಿನ ಭಾಗವು ಪಶ್ಚಿಮ-ದಕ್ಷಿಣ ಭಾಗಗಳಲ್ಲಿ ಬರುವದು ಈ ಭಾಗವು ಗುಡ್ಡಗಾಡು ಹಳವುಗಳಿಂದ ಕೂಡಿರುವದು ಮಳೆಯು ಹೆಚ್ಚು. ಹವೆಯು ಅನಾರೋಗ್ಯಕರವಾದುದು ಪೂರ್ವದ ಭಾಗವು ಬೆಳವಲದ ಸಮ ಭೂಮಿಯಂತಿದೆ ಇಲ್ಲಿ ಹವೆ ಹಿತಕರವಾಗಿದೆ ಮಳೆಯ ಪ್ರಮಾಣವೂ ಕಡಿಮೆ

ಸಹ್ಯಾದ್ರಿಯೂ ಅದರ ಎರಡು ಶಾಖೆಗಳೂ ಈ ಜಿಲ್ಹೆಯಲ್ಲಿ ಹಬ್ಬಿವೆ. ಎಲ್ಲಮ್ಮನ ಗುಡ್ಡವು ೩೦೦೦ ಫೂಟು ಎತ್ತರವಾದ ಒಂದು ಶಿಖರ. ಕೃಷ್ಣಾ, ಘಟಪ್ರಭಾ ಹಾಗೂ ಮಲಪ್ರಭಾ ಈ ಮೂರು ಮುಖ್ಯ ನದಿಗಳು ಈ ಜಿಲ್ಹೆಯಲ್ಲಿ ಹರಿಯುವವು

ಹೆಚ್ಚು ಮಳೆಯಾಗುವ ಪಶ್ಚಿಮ ಭಾಗದಲ್ಲಿ ಭತ್ತ, ಕಬ್ಬು, ತಂಬಾಕುಗಳನ್ನು ಹೆಚ್ಚಾಗಿ ಬೆಳೆಯುವರು ಪೂರ್ವದ ಎರೆಯ ಭೂಮಿಯಲ್ಲಿ ಹತ್ತಿ, ಗೋದಿ, ಜೋಳ, ಸಜ್ಜಿ, ಬೇಳೆಕಾಳುಗಳನ್ನು ಬೆಳೆಯುವರು.

ಬೆಳಗಾವಿ ಇದು ಜಿಲ್ಹೆಯ ಮುಖ್ಯ ಸ್ಥಳವು ಹಳೆಯ ಕೋಟೆಯೊಂದು ಇರುವದು ಅದರಲ್ಲಿ ಸರಕಾರೀ ಕಚೇರಿಗಳನ್ನು ಹಾಕಿರುವರು ಸೈನ್ಯದ ಬೀಡು ಮತ್ತೊಂದು ಭಾಗವಾಗಿದೆ. ಇಲ್ಲಿ ಸೈನಿಕರಿಗಾಗಿ ಮನೆಗಳೂ, ತೋಫುಖಾನೆಯೂ, ಸೈನ್ಯಶಿಕ್ಷಣದ ಶಾಲೆಯೂ ಇರುವವು ಸ್ವಾತಂತ್ರ್ಯದ ಆಂದೋಲನದಲ್ಲಿ ಅನೇಕ ದೇಶಭಕ್ತರಿಗೆ ಆಸರವಾಗಿದ್ದ ಹಿಂಡಲಗಿ ಕಾರಾಗೃಹವು ಮೂರು ಮೈಲು ದೂರದಲ್ಲಿರುವದು. ಹಾಯಸ್ಕೂಲು ಕಾಲೇಜುಗಳಿಂದ ಬೆಳಗಾವಿಯು ಶಿಕ್ಷಣ ಕೇಂದ್ರವೂ ಆಗಿದೆ ಸ್ಥಾನಿಕ–ಸ್ವರಾಜ್ಯ–ಫಾರೆಸ್ಟ್‌ಖಾತೆ ಮೊದಲಾದ ಕೆಲವು ಕೇಂದ್ರ ಕಚೇರಿಗಳೂ ಇಲ್ಲಿ ಇರುವವು ಮೇಲಾಗಿ ಬೆಳಗಾವಿಯು ಮುಂಬಯಿ ಕರ್ನಾಟಕದಲ್ಲಿ-ಇಂದಿನ ಒಂದೇ ಒಂದಾದ ‘ ವಿಮಾನ ನಿಲ್ದಾಣ ’ವಾಗಿದೆ. ಇಲ್ಲಿಂದ ಮುಂಬಯಿ ಬೆಂಗಳೂರುಗಳಿಗೆ ನಿತ್ಯವೂ ವಿಮಾನಗಳ ಸಾರಿಗೆಯಿರುವದು

ಶಹಾಪೂರವು ಬೆಳಗಾವಿಯ ಒಂದು ಉಪನಗರವಿದ್ದಂತೆ ಇಲ್ಲಿ ರೇಶಿಮೆ, ಜರದ ಸೀರೆ, ಖಣಗಳನ್ನು ನೇಯುವರು. ಬೆಳ್ಳಿ ಬಂಗಾರದ ಒಡವೆಗಳ ವ್ಯಾಪಾರವು ಹೆಚ್ಚು. ಚಿಕ್ಕೋಡಿಯಲ್ಲಿ ಬೆಲ್ಲ, ಮೆಣಸಿನಕಾಯಿಗಳ ವ್ಯಾಪಾರವು ನಾಗುವದು ಇಲ್ಲಿ ವೀಳ್ಯದ ಎಲೆಗಳ ತೋಟಗಳು ಬಹಳ. ನಿಪ್ಪಾಣಿಯು ಬೆಲ್ಲ ತಂಬಾಕುಗಳ ವ್ಯವಹಾರದಲ್ಲಿ ಮುಖ್ಯವಾದ ಸ್ಥಳ. ಹುಕ್ಕೇರಿಯಲ್ಲಿ ವಿಜಾಪುರದ ಆದಿಲಶಾಹಿಯ ಸರದಾರನೊಬ್ಬನು ೪೦೦ ವರುಷಗಳ ಹಿಂದೆ ಕಟ್ಟಿಸಿದ ಕಾರಂಜಿಗಳಿರುವವು ಇಲ್ಲಿಯ ಆರೋಗ್ಯಧಾಮವೂ, ಆಸ್ಪತ್ರೆಯೂ ಹೆಸರಾಗಿದೆ. ಗೋಕಾವಿಯ ನೆರೆಯಲ್ಲಿ ಘಟಪ್ರಭೆಯು ತಡಸಲವನ್ನು ಮಾಡಿದೆ ಘಟಪ್ರಭೆಯ ಎರಡೂದಂಡೆಗಳ ಕಾಲುವೆಗಳನ್ನು ಇಲ್ಲಿಂದಲೇ ಪ್ರಾರಂಭಿಸಿರುವರು ತಡಸಲಿನಿಂದ ವಿದ್ಯುತ್‌ಶಕ್ತಿಯನ್ನು ಹುಟ್ಟಿಸಿ, ಅದರಿಂದ ನೂಲಿನ ಗಿರಣಿಯನ್ನು ನಡೆಸುತ್ತಿರುವರು. ಗೋಕಾವಿಯು ಬಣ್ಣದ ಕಟ್ಟಿಗೆಯ ವಸ್ತುಗಳಿಗಾಗಿ ಎಂದಿನಿಂದಲೂ ಹೆಸರಾಗಿದೆ ಅರಭಾವಿಯಲ್ಲಿ ಸರಕಾರಿ ಒಕ್ಕಲುತನದ ತೋಟವಿದೆ ಹಣ್ಣು ಹಂಪಲುಗಳನ್ನು ಬೆಳೆಯುವಲ್ಲಿ ಇಲ್ಲಿ ಹೊಸ ತರದ ಪ್ರಯೋಗಗಳನ್ನು ಮಾಡು-ವರು. ಖಾನಾಪೂರದಲ್ಲಿ ಮಣ್ಣಿನ ಪಾತ್ರೆಗಳಾಗುವವು ಕುಂಬಾರಿಕೆಯನ್ನು ಕಲಿಸುವ ಸರಕಾರಿ ಶಾಲೆಯೂ ಇಲ್ಲಿ ಇರುವದು ಕಿತ್ತೂರು, ವೀರಮಹಿಳೆಯಾದ ಚನ್ನಮ್ಮ ರಾಣಿಯ ಊರು. ಸವದತ್ತಿಯು ರಟ್ಟರಾಜಮನೆತನದ ರಾಜಧಾನಿಯಿತ್ತು. ಸಮೀಪದಲ್ಲಿ ಎಲ್ಲಮ್ಮನ (ರೇಣುಕಾ) ದೇವಾಲಯವಿದೆ ಈ ಶಕ್ತಿ ದೇವತೆಯು ಬಹಳ ಕುಟುಂಬಗಳಿಗೆ ಕುಲದೇವತೆಯಾಗಿದ್ದಾಳೆ ಸೊಗಲದಲ್ಲಿ ಒಂದು ಚಿಕ್ಕ ತಡಸಲು ಇರುವದು ೫೦ ಅಡಿಗಳ ಮೇಲಿಂದ ನೀರು ಕೆಳಗೆ ಬೀಳುವದು. ಇದಕ್ಕೆ ಸೊಗಲ ತೀರ್ಥವೆಂದು ಹೇಳುವರು ಸುತ್ತಲಿನ ಸೃಷ್ಟಿಯ ಸೊಬಗು ಒಳ್ಳೇ ಸುಂದರವಾಗಿದೆ

## ಧಾರವಾಡ ಜಿಲ್ಹೆ

ಈ ಜಿಲ್ಹೆಯ ಸುತ್ತಲೂ ಕನ್ನಡ ಪ್ರದೇಶಗಳಿವೆ. ಈ ಜಿಲ್ಹೆಯು ಕರ್ನಾಟಕದ ನಡುವಿನ ಪ್ರದೇಶ ಕನ್ನಡ ಕವಿಗಳು ಇದನ್ನು 'ತಿರುಳ್ಗನ್ನಡನಾಡು' ಎಂದು ಬಣ್ಣಿಸುವರು ತುಂಗಭದ್ರೆಯು ಇದರ ಪೂರ್ವದ ಸೀಮೆ. ಕೆಳಗಡೆ ಮೈಸೂರಿನ ರಾಜ್ಯ ಈ ಜಿಲ್ಹೆಯ ಪಶ್ಚಿಮದ ಅಂಚು ಮಲೆನಾಡ ಸೇರಗಿಗೆ ಹೊಂದಿಕೊಂಡಿರುವದು. ಆದುದರಿಂದ ತುಸು ಗುಡ್ಡಗಾಡು. ಮಳೆಯ ಪ್ರಮಾಣವು ಆ ಭಾಗದಲ್ಲಿ ತುಸು ಹೆಚ್ಚು. ಅಲ್ಲಿ ಭತ್ತದ ಬೆಳೆಯೆ ಹೆಚ್ಚಿಗೆ

ಉಳಿದ ಭಾಗವೆಲ್ಲ ಪೂರ್ವಕ್ಕೆ ಇಳುಕಲಾದ ಸಮಭೂಮಿಯು. ಈ ಜಿಲ್ಹೆಯಲ್ಲಿ ಬೂದನಗುಡ್ಡ, ಐರಣಿಗುಡ್ಡ, ಕಪೋತಗುಡ್ಡ ಹೀಗೆ ಬೆಟ್ಟಗಳ ಸಾಲುಗಳು ಇರುವವು. ಇವೆಲ್ಲವು ಸಹ್ಯಾದ್ರಿಯ ಅಡಿಯ ದಿನ್ನೆಗಳೆಂದೇ ಹೇಳಬಹುದು ನರಗುಂದದ ಬಿಡಿಗುಡ್ಡದ ಮೇಲೆ ಕೋಟಿಕೊತ್ತಲುಗಳಿರುವವು.

ಈ ಜಿಲ್ಹೆಯಲ್ಲಿ ತುಂಗಭದ್ರೆ, ಮಲಪ್ರಭೆಗಳೇ ಮುಖ್ಯ ನದಿಗಳು. ವರದಾ, ಶಾಲ್ಮಲಾ, ಧರ್ಮಾ, ಕುಮುದ್ವತಿಗಳೆಂಬ ಚಿಕ್ಕ ನದಿಗಳೂ ಹರಿಯುವವು ಈ ಜಿಲ್ಹೆಯಲ್ಲಿ ಕೆರೆಗಳು ಹೆಚ್ಚು. ಮೈಸೂರ ಸೀಮೆಯಲ್ಲಿರುವ ಮದಗ ಮಾಸೂರ ಕೆರೆಯು ದೊಡ್ಡ ಸರೋವರದಂತಿದೆ. ಮಾಸೂರ ಕೆರೆಯಿಂದ ಹಾಗೂ ಧರ್ಮಾನದಿಯಿಂದ ಮಾಡಿದ ಕಾಲುವೆಗಳು ನೂರಾರು ಎಕರೆ ಭೂಮಿಗೆ ನೀರುಣಿಸುವವು.

ಪಶ್ಚಿಮ ಭಾಗದಲ್ಲಿ ಮಳೆ ಹೆಚ್ಚು. ಇಲ್ಲಿಯ ಹವೆ ನೀರು ಹಿತಕರವಲ್ಲ ಉಳಿದ ಭಾಗದಲ್ಲಿ ಬೆಳವಲು ನಾಡಿಗಿಂತಲೂ ಬೇಸಿಗೆಯು ತಂಪಾಗಿ ಇರುವದು. ಮಳೆಗಾಲದಲ್ಲಿ ಮಾತ್ರ ರೋಗಗಳ ಭೀತಿ ಹೆಚ್ಚು. ಹವೆಯು ಸಾಮಾನ್ಯವಾಗಿ ಹಿತಕರ ವಾಗಿರುವುದು. ೩೦–೩೫ ಇಂಚುಗಳಷ್ಟು ಮಳೆಯು, ಸರಾಸರಿಯಾಗಿ ಈ ಜಿಲ್ಹೆಯಲ್ಲಿ ಆಗುವದು

ಪಶ್ಚಿಮ ಭಾಗದಲ್ಲಿ ಕಾಡುಗಳು ಇರುವವು. ಇಲ್ಲಿ ತೇಗು, ಮತ್ತಿ, ಸಾಗವಾನಿ ಮೊದಲಾದ ಗಿಡಗಳು ಬೆಳೆಯುವವು. ನೀರಿನ ಪೂರೈಕೆಯಿರುವಲ್ಲಿ ತೋಟಪಟ್ಟಿಗಳು ಈ ಜಿಲ್ಹೆಯಲ್ಲಿ ಹೆಚ್ಚು ಮಳೆ ಹೆಚ್ಚಾಗುವ ಪಶ್ಚಿಮದ ಮಸಾರಿ ಭೂಮಿಯಲ್ಲಿ ಭತ್ತ, ಕಬ್ಬುಗಳನ್ನು ಬೆಳೆಯುವರು. ಉಳಿದ ಭಾಗವೆಲ್ಲ ಎರೆ ಭೂಮಿಯಿಂದ ಕೂಡಿದ್ದಾಗಿದೆ. ಇಲ್ಲಿ ಹತ್ತಿಯೇ ಮುಖ್ಯ ಬೆಳೆ ಜೋಳ, ಗೋದಿ, ಅಕ್ಕಡಿಕಾಳುಗಳನ್ನು ಬೆಳೆಯುವರು.

ಧಾರವಾಡವು ಜಿಲ್ಹೆಯ ಮುಖ್ಯ ಸ್ಥಳವು. ಮಹಾರಾಷ್ಟ್ರದಲ್ಲಿ ಪುಣೆಯು ವಿದ್ಯಾಕೇಂದ್ರವಿರುವಂತೆ, ಧಾರವಾಡವೂ ಕರ್ನಾಟಕದ ವಿದ್ಯಾಕೇಂದ್ರವಾಗಿರುವದು. ಇಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕಚೇರಿ, ೨ ಕಾಲೇಜುಗಳು, ಅನೇಕ ಹಾಯಸ್ಕೂಲುಗಳು ಇರುವವು. ಇಲ್ಲಿಯ ಕನ್ನಡ ಶಿಕ್ಷಕರ ಟ್ರೇನಿಂಗ ಕಾಲೇಜುಗಳು ಬಹಳ ಹಿಂದಿನವು ಧಾರವಾಡವೇ ಕನ್ನಡ ನಾಡು, ನುಡಿ ಸಂಸ್ಕೃತಿಗಳನ್ನು ಉಳಿಸಿಕೊಂಡು ಬಂದಿದೆ. ಇಲ್ಲಿಯ ಕರ್ನಾಟಕ ವಿದ್ಯಾವರ್ಧಕ ಸಂಘವು, (ಚಾಮರಾಜ ಮಂದಿರವು), ಪ್ರಾದೇಶಿಕ

ನದಿಗಳ ಕೊಳ್ಳಗಳ ಭೂಮಿ ಬಹಳೇ ಬೆಳೆಯುಳ್ಳದ್ದು ಭೂಮಿಯು ಹೆಚ್ಚಾಗಿ ಅಚ್ಚ ಕರಿಯಾದ ಎರೆ. ಕೆಲವೆಡೆಗೆ ಮಾತ್ರ ಮಸಾರಿ ಇಲ್ಲವೆ ಉಸುಕು ನೆಲ. ದಕ್ಷಿಣ ತುದಿಯಲ್ಲಿರುವ ಬಾಗಿಲುಕೋಟೆ, ಬದಾಮಿ ತಾಲೂಕುಗಳಲ್ಲಿ ಕೆಲವು ಬೆಟ್ಟಗಳಿರುವವು. ಉಳಿದ ಕಡೆಗೆ ಏರಿಳಿತದ ಇಳುಕಲಾದ ನೆಲ.

ಬಿಸಿಲು ಹೆಚ್ಚಿಗೆ ಇದ್ದರೂ ಈ ಒಣಹವೆಯು ಒಳ್ಳೇ ಆರೋಗ್ಯಕರ ವಾಗಿರುವದು ಇಲ್ಲಿಯ ಹವೆಗೆ 'ಕಲ್ಲು ತಿಂದು ಕಲ್ಲು ಕರಗಿಸಿಕೊಳ್ಳಬಹುದು' ಎಂದು ಹಿರಿಯರು ಹೇಳುವದುಂಟು. ಜೋಳ, ಸಜ್ಜೆ, ಅಕ್ಕಡಿಕಾಳು ಗಳನ್ನು ಬೆಳೆಯುವ ಪ್ರದೇಶ. ಜನರ ಮುಖ್ಯ ಆಹಾರವೂ ಕೂಡ ಇವುಗಳೇ. ಡೋಣಿಯ ಭಾಗದಲ್ಲಿ ಹತ್ತಿ ಗೋದಿಗಳನ್ನು ಬೆಳೆಯುವರು. ನೀರಿನ ಅನು ಕೂಲತೆಯಿರುವಲ್ಲಿ ಯಾತಗಳಿಂದ ನಡೆಯುವ ಕೆಲವೇ ಕಬ್ಬು, ಎಲೆಬಳ್ಳಿಗಳ ತೋಟಪಟ್ಟಿಗಳನ್ನು ನೀವು ಅಲ್ಲಲ್ಲಿ ಕಾಣಬಹುದು. ಉಸುಕಿನ ಪೊಳ್ಳು ಭೂಮಿಗಳಲ್ಲಿ ಇತ್ತೀಚೆಗೆ ತಮಗೆ ಕೈತುಂಬ ಹಣ ಕೊಡುವ ಶೇಂಗಾದ ಬೆಳೆಯನ್ನು ಒಕ್ಕಲಿಗರು ತೆಗೆದುಕೊಳ್ಳಹತ್ತಿರುವರು.

ಒಕ್ಕಲುತನವೇ ಈ ಜಿಲ್ಹೆಯ ಮುಖ್ಯ ಉದ್ಯೋಗ. ಜೋಳ, ಕುಸುಬೆ, ಆಗಸಿ, ಶೇಂಗಾ ಮೊದಲಾದ ಕಾಳುಕಡಿಗಳ ವ್ಯಾಪಾರವೇ ಮುಖ್ಯ ವ್ಯವಹಾರ. ಅಲ್ಲಲ್ಲಿ ಹತ್ತೀ ಹಿಂಜುವ, ಅರಳೇ ಗಂಟು ಕಟ್ಟುವ ಗಿರಣಿಗಳು ಕಂಡುಬರುವವು. ಗುಡೂರ ಎಂಬಲ್ಲಿ ಮೊದಲು ಕಾಜಿನ ಬಳೆಗಳು ಆಗುತ್ತಿದ್ದವಂತೆ. ಇಂದು ಅಲ್ಲಿ ತಾಮ್ರ ಹಿತ್ತಾಳೆಗಳ ಪಾತ್ರೆಗಳನ್ನು ಮಾಡುವರು ಇಲಕಲ್ಲು, ಅಮೀನಗಡ, ಗುಳೇದಗುಡ್ಡಗಳಲ್ಲಿ ಉತ್ತಮವಾದ ಸೀರೆ, ಖಣಗಳನ್ನು ನೇಯುವರು.

ವಿಜಾಪೂರ:—ಇದು ಜಿಲ್ಹೆಯ ಮುಖ್ಯ ಸ್ಥಳವು ಆದಿಲಶಾಹೀ ರಾಜ್ಯದ ಹಳೆಯ ರಾಜಧಾನಿಯು. ಇಂದಿಗೂ ಇಲ್ಲಿ ಅಚ್ಚಳಿಯದೆ ಉಳಿ ದಿರುವ ಕೆಲವು ಆದಿಲಶಾಹೀ ಕಟ್ಟಡಗಳನ್ನು ನೋಡಲು ದೂರದ ಜನರು ಇಲ್ಲಿಗೆ ನಿತ್ಯವೂ ಬರುವರು ಈ ಕಟ್ಟಡಗಳು ಹಿಂದಿನ ವೈಭವವನ್ನು ಸಾರಿ ಹೇಳುವಂತಿದೆ. ಬೋಲಗುಮ್ಮಟ, ಆಸಾರಮಹಾಲ, ಜುಮ್ಮಾಮಸೀದೆ, ಹಾಗೂ ಇಬ್ರಾಹಿಮರೋಜಾ ಇವುಗಳು ಮುಖ್ಯವಾದವುಗಳು. ಬೋಲ ಗುಮ್ಮಟವು ಈ ಜಗತ್ತಿನಲ್ಲಿಯೇ ಹೆಸರಾದ, ಸೋಜಿಗದ ಸಂಗತಿಗಳಲ್ಲಿ ಒಂದಾಗಿದೆ. ಇದರ ಗುಮ್ಮಟವು ಬಹಳೇ ದೊಡ್ಡದು ಒಳಭಾಗದಲ್ಲಿ ಒಮ್ಮೆ ಹೇಳಿದ ಮಾತು ಆರೇಳು ಸಲ ತಿರುತಿರುಗಿ ಕೇಳಿಸುವದು ಒಂದು

ತುದಿಯಲ್ಲಿ ಆಡಿದ ಕಿವಿಮಾತು ದೂರದ ಮತ್ತೊಂದು ತುದಿಗೂ ಕೇಳಬರುವದು. ಜುಮ್ಮಾ ಮಸೀದೆಯು ಪ್ರಾರ್ಥನಾ ಮಂದಿರವು. ಈ ಕಟ್ಟಡಗಳಲ್ಲದೆ, ಇಲ್ಲಿ ‘ ಮುಲುಖ್-ಮೈದಾನ ’ ವೆಂಬ ಬಹಳೇ ದೊಡ್ಡ ಆಕಾರದ ತೋಫು ಇರುವದು. ತಾಳೀಕೋಟೆಯ ಕಾಳಗದಲ್ಲಿ ಈ ತೋಫಿನ ಗರ್ಜನೆಗೆ



ಆಕೃತಿ ೨೦ ಗೋಲಗುಮ್ಮಟ

ರಾಮರಾಯನ ಆನೆಗಳು ಬೆದರಿದನಂತೆ. ಅಭಿನವ ಪಂಪನೆಂಬ ಕನ್ನಡ ಕವಿಯು ತಾನು ‘ ವಿಜಯಪುರ ’ ದವನೆಂದು ಹೇಳಿರುವನು. ಈ ಜಿಲ್ಲೆಯೇ ಅನೇಕ ಕವಿಗಳಿಗೆ, ಶಿವಶರಣರಿಗೆ, ಹರಿದಾಸರಿಗೆ ಜನ್ಮ ಕೊಟ್ಟಿದೆ. ಸಮೀಪದಲ್ಲಿರುವ ತೊರವೆಯು ಒಂದು ಕ್ಷೇತ್ರವು ‘ ತೊರವೆ ರಾಮಾಯಣ’ವನ್ನು ಬರೆದ ನರಹರಿ ಕವಿಯು ಇಲ್ಲಿಯ ನೃಸಿಂಹದೇವರ ಉಪಾಸಕನು. ವೀರಶೈವ ಮತೋದ್ಧಾರಕರಾದ ಶ್ರೀ ಬಸವಣ್ಣನವರಿಗೆ ಬಸವನಬಾಗೇವಾಡಿಯೇ ಜನ್ಮಭೂಮಿಯಾಗಿದೆ. ಹಿಪ್ಪರಿಗೆಯು ಶಿವಶರಣರ ಬೀಡಾಗಿತ್ತು. ಬಾಗಿಲುಕೋಟೆಯು ‘ ಪ್ರಸನ್ನವೇಂಕಟರ ’, ಕಾಖಂಡಿಕೆಯು ‘ ಮಹಿಪತಿ ಸ್ವಾಮಿಗಳ ’ ಸ್ಥಾನಗಳಾಗಿವೆ. ‘ ಮುದುವೊಳಲ್ ’ ಇಂದಿನ ಮುಧೋಳವು ಕನ್ನಡ ಕವಿಶ್ರೇಷ್ಠನಾದ ರನ್ನನು ಹುಟ್ಟಿ ಬೆಳೆದ ಊರು. ಜಮಖಂಡಿಯು ಇಂದು ಶಿಕ್ಷಣ ಸಂಸ್ಥೆಗಳ ಕೇಂದ್ರವಾಗಹತ್ತಿದೆ. ಬಾಗಿಲುಕೋಟೆಯು ವ್ಯಾಪಾರದ ಪಟ್ಟಣವು. ಹತ್ತಿ, ಅರಳೆಗಳ ವ್ಯಾಪಾರವು ಇಲ್ಲಿ ಹೆಚ್ಚು. ಹತ್ತಿ ಅರೆಯುವ, ಗಂಟು ಕಟ್ಟುವ ಕೆಲವು ಗಿರಣಿಗಳೂ ಇಲ್ಲಿ ಇರುವವು. ಜಿಲ್ಲೆಯ

ಬಹುತೇಕವಾಗಿ ಎಲ್ಲ ತಾಲೂಕುಗಳಲ್ಲಿ ಹೈಸ್ಕೂಲುಗಳು ಇರುವವು. ಬಾಗಿಲುಕೋಟೆ, ವಿಜಾಪೂರಗಳಲ್ಲಿ ಕಾಲೇಜುಗಳೂ ಇರುವವು. ಬಾಗಿಲುಕೋಟೆಯಲ್ಲಿ ಇತ್ತೀಚೆಗೆ ಸ್ಥಾಪಿಸಿದ ಸಿಮೆಂಟ ಕಾರಖಾನೆಯು ಭಾರತದ ದೊಡ್ಡ ಕಾರಖಾನೆಗಳಲ್ಲಿ ಒಂದಾಗಿರುವದು. ತಾಳೀಕೋಟೆ ಇದು ಸರಹದ್ದಿನ ದೊಡ್ಡೂರು. ವ್ಯಾಪಾರದ ಪಡಿಮೂಲೆಯಾಗಿದೆ. ಈ ಊರಿನ ಸಮೀಪದಲ್ಲಿ ಫರಶೀ ಕಲ್ಲುಗಳು ವೆಗ್ಗಳವಾಗಿ ದೊರೆಯುವವು. ಇಳಕಲ್ಲು, ಗುಳೇದಗುಡ್ಡಗಳಲ್ಲಿ ಸೀರೆ ಖಣಗಳ ನೇಕಾರಿಕೆಯು ಮೊದಲಿನಿಂದಲೂ ಹೆಸರಾಗಿದೆ ಇಳಕಲ್ಲ ಸೀರೆಗಳು ಭಾರತದಲ್ಲೆಲ್ಲ ಪ್ರಸಿದ್ಧವಾಗಿವೆ. ಕಪ್ಪಡಿಸಂಗಮವು ದೊಡ್ಡ ಕ್ಷೇತ್ರಸ್ಥಳವಾಗಿದೆ. ಪಟ್ಟದಕಲ್ಲು, ಐಹೊಳೆಗಳು ಕನ್ನಡ ಅರಸರ ಹಿಂದಿನ ರಾಜಧಾನಿಗಳು. ಇಲ್ಲಿಯ ಗುಡಿಗಳು ಭವ್ಯವಾದವುಗಳು. ಶ್ರೇಷ್ಠವಾದ ಶಿಲ್ಪಕಲೆಯು ಅವುಗಳಲ್ಲಿ ಕಂಡುಬರುವದು. ಬಾದಾಮಿಯು ಚಾಲುಕ್ಯ



ಆಕೃತಿ ೨೧. ಐಹೊಳೆಯ ಒಂದು ದೇವಾಲಯ.

ರಾಜರ ಪ್ರಾಚೀನ ರಾಜಧಾನಿಯು. ಇಲ್ಲಿ ಗುಡ್ಡದಲ್ಲಿ ಕೊರೆದ 'ಮೇಣಬಸ್ತಿ'ಗಳೆಂಬ ಗವಿಗಳಿವೆ. ಇವುಗಳಲ್ಲಿ ಕಲ್ಲಿನಲ್ಲಿ ಕೆತ್ತಿದ ಸುಂದರವಾದ ಮೂರ್ತಿಗಳಿರುವವು. ಚಾಲುಕ್ಯರ ಕಾಲದ ಕೆಲವು ಗುಡಿಗಳನ್ನು ನೀವು ಇಲ್ಲಿ ನೋಡಬಹುದು. ಸಮೀಪದಲ್ಲಿ 'ದಕ್ಷಿಣ ಕಾಶಿ' ಯೆಂದು ಹೆಸರಾದ ಮಹಾಕೂಟೇಶ್ವರನ ದೇವಾಲಯವಿದೆ. ಬನಶಂಕರಿಯ ಸುತ್ತಲಿನ ಸೃಷ್ಟಿಯ ಸೊಬಗು ಒಳ್ಳೇ ಸುಂದರವಾಗಿದೆ.

೧ ಕನ್ನಡ ಜಿಲ್ಹೆಗಳು ಈ ರಾಜ್ಯದ ಯಾವ ಭಾಗದಲ್ಲಿ ಬರುವವು?

೨ ಗುಜರಾಥ ಹಾಗೂ ಮುಂಬಯಿ ರಾಜ್ಯದ ತಪ್ಪಲು ಪ್ರದೇಶಗಳನ್ನು, ಹವೆ, ಮಳೆ, ಬೆಳೆ, ಉದ್ಯೋಗಗಳ ದೃಷ್ಟಿಯಿಂದ ತುಲನೆ ಮಾಡಿರಿ

೩ ಕೆಳಗೆ ಕೊಟ್ಟ ಸಂಗತಿಗಳಿಗೆ ಕಾರಣಗಳನ್ನು ಕೊಡಿರಿ.—

ಅ) ಗುಜರಾಥ, ಖಾನದೇಶಗಳಲ್ಲಿ ಉತ್ತಮವಾದ ಹತ್ತಿಯು ಬೆಳೆಯುವದು.

ಬ) ಗುಜರಾಥದಲ್ಲಿಯ ಎಲ್ಲ ಮಾರ್ಗಗಳೂ ಅಹ್ಮದಾಬಾದದಲ್ಲಿ ಕೂಡಿ ಕೊಳ್ಳುವವು.

ಕ) ಮಹಾರಾಷ್ಟ್ರದ ಬೆಳೆಗಳು ಒಂದೇ ವಿಧವಾಗಿಲ್ಲ

ಡ) ಕೊಂಕಣವನ್ನು ನೋಡಲು ಚಳಿಗಾಲದಲ್ಲಿ ಹೋಗಬೇಕು.

ಇ) ಮುಂಬಯಿ ಶ್ರೇಷ್ಠವಾದ ಬಂದರವಾಗಿರುವದು

ಫ) ವಿಜಾಪೂರ ಜಿಲ್ಹೆಯಲ್ಲಿ ಆಗಾಗ್ಗೆ ಬರದ ಭಯವಿರುವದು

೪ ಕೆಳಗೆ ಕೊಟ್ಟ ಪಟ್ಟಣಗಳು ಮುಂದೆ ಬರಲು ಕಾರಣವೇನು?

ಬಡೋದೆ, ನಾಸಿಕ, ಕೊಲ್ಹಾಪೂರ, ಹುಬ್ಬಳ್ಳಿ, ಬಾಗಿಲುಕೋಟೆ.

ಪ್ರಕರಣ ೮

# ಭಾಷೆಗಳು

ನೀವು ಇದುವರೆಗೆ ಈ ರಾಜ್ಯದ ಬೇರೆ ಬೇರೆ ಭಾಗಗಳನ್ನೆಲ್ಲ ಸುತ್ತು ವರಿದು ಬಂದಿರುವಿರಿ. ನೀವು ಇನ್ನು ಮುಂದೆ ಭಾರತದ ಉಳಿದ ರಾಜ್ಯಗಳ ಪರಿಚಯವನ್ನು ಮಾಡಿಕೊಳ್ಳುವದಿದೆ. ಮುಂಬಯಿ ರಾಜ್ಯದ ಬಗ್ಗೆ ಒಂದು ವಿಶೇಷವಾದ ಸಂಗತಿಯು ನಿಮಗೆ ಕಂಡುಬರುವದು ಜಗತ್ತಿನಲ್ಲಿ ಕಂಡು ಬರುವ ಭೂರಚನೆಯ ಮಾದರಿಗಳನ್ನೆಲ್ಲ ನೀವು ಇಲ್ಲಿ ಕಾಣಬಹುದು. ಇಲ್ಲಿ ಬೆಟ್ಟಗಳಿವೆ, ಗಿರಿಶಿಖರಗಳಿವೆ, ತಪ್ಪಲು ಪ್ರದೇಶವಿದೆ, ಸಮನೆಲದ ಬಯಲು ಭೂಮಿಯಿದೆ. ಮರುಭೂಮಿಯನ್ನು ಹೋಲುವ ಉಸುಕು ಪ್ರದೇಶ ಗಳಿವೆ ಬೇರೆ ಬೇರೆ ಭಾಗಗಳಲ್ಲಿ ಮಳೆ–ಬೆಳೆಗಳು ಎಷ್ಟೊಂದು ಭಿನ್ನವಾಗಿವೆ. ಇಷ್ಟೊಂದು ವಿವಿಧತೆಯನ್ನು ನೀವು ಬೇರೆ ರಾಜ್ಯಗಳಲ್ಲಿ ಕಾಣಲಾರಿರಿ. ಜನ ರಾಡುವ ಭಾಷೆಯಲ್ಲಿಯೂ ಕೂಡ ನಿಮಗೆ ವಿವಿಧತೆಯು ಕಂಡುಬರುವದು. ಈ ರಾಜ್ಯದಲ್ಲಿ ಗುಜರಾಥಿ, ಮರಾಠಿ, ಕನ್ನಡ ಎನ್ನುವ ಮೂರು ಭಾಷೆಗಳು

ಮುಖ್ಯವಾದವುಗಳು. ಅವುಗಳಿಗೆ ಅನುಗುಣವಾಗಿಯೆ ಗುಜರಾಥ, ಮಹಾರಾಷ್ಟ್ರ ಹಾಗೂ ಕನ್ನಡವೆಂದು ಮೂರು ವಿಭಾಗಗಳನ್ನು ಈ ರಾಜ್ಯದಲ್ಲಿ ಅನುಕೂಲತೆಗಾಗಿ ಮಾಡಿರುವದುಂಟು ಗುಜರಾಥದಲ್ಲಿ ಗುಜರಾಥೀ ಭಾಷೆಯೇ ಮುಖ್ಯವಾದುದು ಇದು ಸಂಸ್ಕೃತದಿಂದಲೇ ಹುಟ್ಟಿದ ಭಾಷೆಯಾಗಿರುವದು. ಅಲ್ಪ ವ್ಯತ್ಯಾಸಗಳುಳ್ಳ ದೇವನಾಗರಿ ಲಿಪಿಯನ್ನೇ ಈ ಭಾಷೆಗಾಗಿ ಉಪಯೋಗಿಸುವದುಂಟು. ಈ ಭಾಷೆಯಲ್ಲಿ ನರಸೀ ಮೆಹತಾನಂತಹ ಸಾಧುಗಳು ಭಕ್ತಿ ಗೀತಗಳನ್ನು ಹಾಡಿರುವರು. ಗುಜರಾಥಿಗಳು ದೇಶದ ಯಾವುದೇ ಭಾಗದಲ್ಲಿ ನೆಲಿಸಿದರೂ, ಮನೆಯೊಳಗೆ ಹಾಗೂ ತಮ್ಮ ತಮ್ಮೊಳಗೆ ಮಾತೃಭಾಷೆಯಾದ ಗುಜರಾಥಿಯನ್ನೇ ಬಳಸುವರು. ಗಾಂಧೀಜಿಯವರ ಮಾತೃಭಾಷೆಯು ಗುಜರಾಥಿಯಾಗಿತ್ತು. ಅವರು ತಮ್ಮ ಲೇಖನಗಳನ್ನೆಲ್ಲ ಮೊದಲು ಗುಜರಾಥಿಯಲ್ಲಿಯೇ ಬರೆಯುತ್ತಿದ್ದರಂತೆ.




ಆಕೃತಿ ೨೨ ಭಾಷೆಗಳು

ಮಹಾರಾಷ್ಟ್ರದಲ್ಲಿ ಬಹು ಜನರು ಆಡುವ ಭಾಷೆಯು ಮರಾಠಿಯು. ಈ ಭಾಷೆಗಾದರೂ ಸಂಸ್ಕೃತವೇ ತಾಯಿಯು ದೇವನಾಗರಿ (ಬಾಲಬೋಧ) ಲಿಪಿಯನ್ನೇ ಮರಾಠಿಗಾಗಿ ಉಪಯೋಗಿಸುವರು ಭಾರತದ ಮುಂದುವರಿದ ಭಾಷೆಗಳಲ್ಲಿ ಮರಾಠಿಯೂ ಒಂದಾಗಿದೆ. ಸಮರ್ಥ ರಾಮದಾಸರೂ ತುಕಾರಾಮ, ಜ್ಞಾನೇಶ್ವರರಂಥ ಸಂತರೂ ಮರಾಠೀ ಭಾಷೆಯ ಸಂಪತ್ತನ್ನು ಬೆಳಿಸಿದ್ದಾರೆ.

ಕರ್ನಾಟಕದ ಜನರು ಆಡುವ ಭಾಷೆಯೆ 'ಕನ್ನಡ'ವಾಗಿದೆ ಕನ್ನಡ ಭಾಷೆಯನ್ನಾಡುವ ಜನಾಂಗ ಬೇರೆ ಬೇರೆ ರಾಜ್ಯಗಳಲ್ಲಿ ಹರಿದು ಹಂಚಿ ಹೋಗಿದೆಯೆಂದು ಹಿಂದೆ ಹೇಳಿದೆ ಕನ್ನಡವು ಸ್ವತಂತ್ರವಾದ ಭಾಷೆ ದ್ರವಿಡ ಭಾಷೆಗಳ ಗುಂಪಿಗೆ ಅದು ಸೇರಿರುವದು ಇದೊಂದು ಪ್ರಾಚೀನ ಭಾಷೆ ಇದರ ಲಿಪಿಯೂ ಸ್ವತಂತ್ರವಾದುದು ಈ ಭಾಷೆಯಲ್ಲಿ ಬಹಳೇ ಹಿಂದಿನ ಕಾಲದ ಉತ್ತಮವಾದ ಗ್ರಂಥಗಳಿರುವವು ಪಂಪ, ರನ್ನ, ಹರಿಹರ, ಕುಮಾರವ್ಯಾಸ ಇವರು ಕನ್ನಡದಲ್ಲಿ ಶ್ರೇಷ್ಠರಾದ ಕವಿಗಳು ಅನೇಕ ದಾಸರೂ, ಶರಣರೂ ಕನ್ನಡದಲ್ಲಿ ಸುಂದರವಾದ ಹಾಡುಗಳನ್ನೂ ವಚನಗಳನ್ನೂ ರಚಿಸಿರುವರು

ಈ ಮೂರು ಭಾಷೆಗಳಲ್ಲದೆ ಕಲವೇ ಜನರಾಡುವ ಉಪಭಾಷೆಗಳೂ ಈ ರಾಜ್ಯದಲ್ಲಿ ಕೇಳಬರುವವು. ಕರಾವಳಿಯ ಪ್ರದೇಶದ ಜನರು "ಕೊಂಕಣಿ" ಭಾಷೆಯನ್ನಾಡುವರು ಈ ಭಾಷೆಗೆ ಪ್ರತ್ಯೇಕ ಲಿಪಿಯು ಇರುವದಿಲ್ಲ ಇವುಗಳಲ್ಲದೆ, ಹಿಂದುಳಿದ ಜನರು ಆಡುವ ಕೆಲವು ಬೇರೆ ಭಾಷೆಗಳೂ ಇರುವವು ಒಡ್ಡರೂ ಲಮಾಣಿಗಳೂ ಮೊದಲಾದ ಗುಂಪಿನ ಜನರ ಭಾಷೆಗಳೂ ಬೇರೆಯಾಗಿರುವವು.

## ಅಭ್ಯಸನಗಳು

೧ ಮುಂಬಯಿ ರಾಜ್ಯದ ಭೂರಚನೆಯು ವಿವಿಧವಾಗಿರುವಂತೆ ಅಲ್ಲಿಯ ಭಾಷೆಗಳೂ ವಿವಿಧವಾಗಿರುವವು— ವಿವೇಚಿಸಿರಿ

೨ ಈ ರಾಜ್ಯದ ಭಾಷೆಗಳಲ್ಲಿ ಯಾವುದು ಹೆಚ್ಚು ಪ್ರಾಚೀನವಾದುದು ? ಯಾವ ಭಾಷೆಗೆ ಸ್ವತಂತ್ರ ಲಿಪಿ ಇರುವದು ?

೩ ಗುಜರಾಥಿ, ಮರಾಠಿ, ಕನ್ನಡ ಈ ಭಾಷೆಗಳಿಗೆ ಹೆಚ್ಚು ಸೇವೆ ಸಲ್ಲಿಸಿದ ಕೆಲವು ಮಹನೀಯರ ಹೆಸರುಗಳನ್ನು ಹೇಳಿರಿ

ಪ್ರಕರಣ ೯

# ಉದ್ಯೋಗಗಳು

ಜನರು ಆಡುವ ಭಾಷೆ ಪರಂಪರೆಯಿಂದ ಸಾಗಿಬರುವದು. ಆದರೆ ಜನರು ಕೈಕೊಳ್ಳುವ ಉದ್ಯೋಗಗಳು ಅವರು ನೆಲೆಸಿರುವ ಪ್ರದೇಶಗಳ ಹವೆ, ಮಳೆ, ಬೆಳೆ ಹಾಗೂ ಅಲ್ಲಿ ದೊರೆಯುವ ಖನಿಜಗಳನ್ನೇ ಹೆಚ್ಚಾಗಿ ಅವಲಂಬಿಸಿರುವವು ಮುಂಬಯಿ ರಾಜ್ಯದಲ್ಲಿ ಮುಖ್ಯ ಉದ್ಯೋಗಗಳನ್ನು ನೋಡಿಕೊಂಡು ಬನ್ನಿರಿ. ಅವುಗಳಿಗೆ ಅಲ್ಲಿಯ ಹವೆ, ಮಳೆ, ಬೆಳೆ ಹಾಗೂ ಖನಿಜಗಳು ಎಷ್ಟರಮಟ್ಟಿಗೆ ಕಾರಣವಾಗಿರುವವೆಂಬುದನ್ನು ನೀವು ತಿಳಿದುಕೊಳ್ಳುವಿರಂತೆ.




ಆಕೃತಿ ೨೩. ಮುಂಬಯಿ ರಾಜ್ಯದಲ್ಲಿಯ ಮುಖ್ಯ ಉದ್ಯೋಗಗಳು.

ನಮ್ಮ ದೇಶವೇ ಒಕ್ಕಲುತನದ ನಾಡು. ಒಕ್ಕಲುತನವೇ ಸಾಮಾನ್ಯವಾಗಿ ಇಲ್ಲಿಯ ಜನರ ಉದ್ಯೋಗವಾಗಿದೆ. ಮುಂಬಯಿ ರಾಜ್ಯದಲ್ಲಿಯೂ ಇದೇ ರೀತಿಯಾಗಿರುವದು. ಅನುಕೂಲತೆಯಿರುವಲ್ಲೆಲ್ಲ ಕೆಲವೊಂದು

ಕೈಗಾರಿಕೆಗುಳು ಳಳಿದುಕೊಂಡಿರುವವು. ಯಂತ್ರಗಳ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ನಡೆಯುವ ಎರಡು ಉದ್ಯೋಗಗಳು ಈ ರಾಜ್ಯದಲ್ಲಿ ನಿಮಗೆ ಕಂಡುಬರುವವು. (೧) ಬಟ್ಟೆಯ ಗಿರಣಿಗಳು, (೨) ಸಕ್ಕರೆಯ ಕಾರಖಾನೆಗಳು.

**ಬಟ್ಟೆಯ ಗಿರಣಿಗಳು:—** ಬಟ್ಟೆಗಳ ತಯಾರಿಕೆಯು ಎರಡು ರೀತಿಗಳಿಂದ ಸಾಗುವದು. (೧) ಕೈಮಗ್ಗಗಳಿಂದ, (೨) ಗಿರಣಿಗಳಲ್ಲಿ ಯಂತ್ರಗಳ ಸಹಾಯದಿಂದ. ಕೈಮಗ್ಗಗಳಿಂದ, ಬಟ್ಟೆಗಳನ್ನು ತಯಾರಿಸುವದಕ್ಕೆ ನೇಕಾರಿಕೆಯೆನ್ನುವರು. ಈ ರಾಜ್ಯದಲ್ಲಿ ನೇಕಾರಿಕೆಯು ಹಿಂದಿನಿಂದಲೂ ಸಾಗಿಬಂದ ಉದ್ಯೋಗವಾಗಿದೆ. ಇಳಕಲ್ ಸೀರೆಗಳು—ಬಣ್ಣ, ನಯ್ಯ ಹಾಗೂ ನೇಗೆಗಾಗಿ ಎಂದಿನಿಂದಲೂ ಹೆಸರು ಪಡೆದಿವೆ. ಇದೇ ಮೇರೆಗೆ ಗುಜರಾಥ, ಮಹಾರಾಷ್ಟ್ರಗಳಲ್ಲಿ ಕೂಡ ಹೆಸರಾದ ನೇಕಾರಿಕೆಯ ಕೇಂದ್ರಗಳಿರುವವು.

ಯಂತ್ರಯುಗವು ಪ್ರಾರಂಭವಾಯಿತು. ಮನೆಮನೆಗಳಲ್ಲಿ ನಡೆಯುತ್ತಿದ್ದ ಕೈಮಗ್ಗಗಳು ಮೂಲೆಗುಂಪಾಗಬೇಕಾಯಿತು ಹತ್ತು ಕೈಮಗ್ಗಗಳು ಹತ್ತು ದಿನಗಳಲ್ಲಿ ನೇಯಬಹುದಾದ ಬಟ್ಟೆಯನ್ನು ಗಿರಣಿಗಳಲ್ಲಿ ಯಂತ್ರದ ಒಂದೇ ಮಗ್ಗವು ಹತ್ತು ತಾಸುಗಳಲ್ಲಿ ನೇಯುವಂತಾಯಿತು.

ಯಂತ್ರದ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ನಡೆಯುವ ಯಾವದೇ ಉದ್ಯೋಗಕ್ಕಾದರೂ ಕೆಲವೊಂದು ಸಂಗತಿಗಳು ಆಗತ್ಯವಾಗಿರುವವು. (೧) ಆ ಉದ್ಯೋಗಕ್ಕಾಗಿ ಬೇಕಾಗುವ ಕಚ್ಚಾ ಸರಕುಗಳ—ಮೂಲ ದ್ರವ್ಯಗಳ ಪೂರೈಕೆ, (೨) ಯಂತ್ರಗಳನ್ನು ನಡೆಸಲು ಬೇಕಾಗುವ ಕಲ್ಲಿದ್ದಲಿ, ವಿದ್ಯುತ್‌ಶಕ್ತಿ, (೩) ಕಾರಖಾನೆಗಳಲ್ಲಿ ಕೆಲಸ ಮಾಡಲು ಕೂಲಿಕಾರರು, (೪) ಸರಕಗಳನ್ನು ತರಲು ಇಲ್ಲವೆ ಕಳಿಸಲು ಮಾರ್ಗಗಳ ಸೌಕರ್ಯ. ಇವುಗಳಲ್ಲದೆ ಕೆಲವೊಂದು ಉದ್ಯೋಗಕ್ಕೆ ಒಂದು ವಿಶಿಷ್ಟ ಪ್ರಕಾರದ ಹವೆಯಿರುವದು ಹಿತಕರವಾಗುವದು ಉದಾಹರಣೆಗಾಗಿ ಬಟ್ಟೆಯ ಉದ್ಯೋಗವನ್ನೇ ತೆಗೆದುಕೊಳ್ಳಿರಿ. ಒಣ ಹವೆಯಲ್ಲಿ ನೂಲಿನ ಎಳೆಯು ಹರಿಯುವದು. ಆರ್ದ್ರವಾದ ಹವೆಯು ಇರುವಲ್ಲಿ ಬೇಕಾದಷ್ಟು ಸೂಕ್ಷ್ಮವಾದ ಎಳೆಯನ್ನಾದರೂ ತೆಗೆಯಲು ಬರುವದು. ಮುಂಬಯಿಯ ಹವೆಯಲ್ಲಿ ಈ ಬಗೆಯ ತೇವು ತುಂಬಿರುವದು ಅಂತೆಯೇ ಮುಂಬಯಿಯಲ್ಲಿ ಬಟ್ಟೆಗಿರಣಿಗಳು ಹಚ್ಚು.

ಮುಂಬಯಿ ರಾಜ್ಯದಲ್ಲಿ ಬಟ್ಟೆಗಿರಣಿಗಳಿಗೆ ಬೇಕಾಗುವ ಎಲ್ಲ ಅನುಕೂಲತೆಗಳಿವೆ ಗುಜರಾಥ, ಖಾನದೇಶ ಹಾಗೂ ಕರ್ನಾಟಕಗಳಲ್ಲಿ ಉತ್ತಮವಾದ ಹತ್ತಿಯು ವಿಪುಲವಾಗಿ ಬೆಳೆಯುತ್ತಿದೆ ಹತ್ತಿಯ ಬೆಳೆಗೆ ಬೇಕಾಗುವ ಕರಿಯ ಭೂಮಿ, ಅಲ್ಪ ಮಳೆ ಹಾಗೂ ಉಷ್ಣತೆ ಈ ಭಾಗಗಳಲ್ಲಿ ಕಂಡುಬರುವವು ಮುಂಬಯಿಗೆ ಈ ಪ್ರದೇಶಗಳೆಲ್ಲವೂ ಹಿನ್ನಾಡುಗಳಾಗಿರುವವು ಇವೆಲ್ಲ ಪ್ರದೇಶಗಳೂ ಮುಂಬಯಿಗೆ ರೇಲು ಮಾರ್ಗಗಳಿಂದ ಜೋಡಿಸಲ್ಪಟ್ಟಿರುವವು. ಮುಂಬಯಿಯು ಸುರಕ್ಷಿತವಾದ, ಸ್ವಾಭಾವಿಕವಾದ, ವಿಶಾಲಬಂದರವಾಗಿದೆ. ಯುರೋಪದ ರಾಷ್ಟ್ರಗಳಿಂದ ಬೇಕಾದ ಯಂತ್ರಸಾಮಗ್ರಿಗಳನ್ನು ತರಿಸಿಕೊಳ್ಳಲು ಅದೇ ಸಮೀಪದ ಬಂದರವೆನ್ನಬಹುದು ಪಶ್ಚಿಮ ಘಟ್ಟಗಳ ಮೇಲೆ ಸುರಿಯುವ ಮಳೆಯ ನೀರನ್ನು ಸಂಗ್ರಹಿಸಿ ಅದರಿಂದ ವಿದ್ಯುತ್-ಶಕ್ತಿಯನ್ನು ಉತ್ಪಾದಿಸುವರು. ಈ ವಿದ್ಯುತ್-ಶಕ್ತಿಯ ಸಹಾಯದಿಂದ ಕಲ್ಲಿದ್ದಲಿಗಿಂತಲೂ ಕಡಿಮೆ ವೆಚ್ಚದಲ್ಲಿ ಮುಂಬಯಿಯ ಗಿರಣಿಗಳು ನಡೆಯುವವು. ಹಿನ್ನಾಡುಗಳಾದ ಗುಜರಾಥ, ಖಾನದೇಶ ಹಾಗೂ ಕರ್ನಾಟಕಗಳಿಂದ ಸಮೃದ್ಧವಾದ ಹತ್ತಿಯ ಪೂರೈಕೆಯಾಗುವದು. ಈ ಪ್ರದೇಶಗಳ ಬಡ ಜಿಲ್ಹೆಗಳಿಂದ ಗಿರಣಿಗಳಲ್ಲಿ ಕೆಲಸ ಮಾಡಲು ಬೇಕಾದಷ್ಟು ಕೂಲಿಕಾರರು ದೊರೆಯುವರು ಮಾರ್ಗಗಳ ಅನುಕೂಲತೆಯಂತೂ ಪೂರ್ಣವಾಗಿರುವದು. ಸಮುದ್ರದ ದಂಡೆಯಾದುದರಿಂದ ಹವೆಯಲ್ಲಿ ಆರ್ದ್ರತೆಯಿರುವದು. ಈ ಆರ್ದ್ರತೆಯಿಂದ ಎಳೆಗಳನ್ನು ಎಷ್ಟು ಜಿನುಗಾಗಿ ತೆಗೆದರೂ ಅವು ಹರಿಯುವದಿಲ್ಲ. ಅಂತೆಯೆ ಮುಂಬಯಿಯು ಬಟ್ಟೆಗಿರಣಿಗಳ ಕೇಂದ್ರವಾಗಿರುವದು. ಒಂದು ನೂರರ ವರೆಗೆ ಬಟ್ಟೆ ಗಿರಣಿಗಳು ಮುಂಬಯಿ ಒಂದೇ ನಗರದಲ್ಲಿ ಕಂಡುಬರುವವು ಮುಂಬಯಿಯು ಮುಂದೆ ಬರಲು, ಇಷ್ಟೊಂದು ಬೆಳೆಯಲು ಅಲ್ಲಿಯ ಜವಳೀ ಉದ್ಯೋಗವು ಮುಖ್ಯ ಕಾರಣವೆಂದು ಹೇಳಬಹುದು. ಮೊದಲನೆಯ ಬಟ್ಟೆಯ ಗಿರಣಿಯು ಈ ದೇಶದಲ್ಲಿ ಮುಂಬಯಿಯಲ್ಲಿಯೇ ಸ್ಥಾಪಿತವಾಯಿತು. ಅಂದಿನಿಂದ ಇಂದಿನ ವರೆಗೆ ಗಿರಣಿಗಳ ಸಂಖ್ಯೆಯೂ ಹೆಚ್ಚುತ್ತಲಿದೆ. ಜನಸಂಖ್ಯೆಯೂ ಹೆಚ್ಚುತ್ತಲಿದೆ. ಗುಜರಾಥೀ, ಪಾರ್ಸೀ, ಶಿರಿವಂತರು ಹೇರಳವಾದ ಹಣವನ್ನು ಈ ಗಿರಣಿಗಳಲ್ಲಿ ಹಾಕಿರುವರು. ಎಷ್ಟೋ ಸಾವಿರಗಳಷ್ಟು ಜನರು ಕೆಲಸಕ್ಕಾಗಿ ಈ ಗಿರಣಿಗಳಲ್ಲಿ ತೊಡಗಿರುವರು.

ಜವಳೀ ಉದ್ಯೋಗದಲ್ಲಿ ಅಹ್ಮದಾಬಾದವು ಎರಡನೆಯ ಮುಖ್ಯ ಪಟ್ಟಣವು. ಅಹ್ಮದಾಬಾದದ ಸುತ್ತುಮುತ್ತಲಿನ ಪ್ರದೇಶದಲ್ಲಿ ಗುಜರಾಥ,

ಕಾಠೇವಾಡದಲ್ಲಿ ಉತ್ತಮವಾದ ಹತ್ತಿಯು ಬೆಳೆಯುವದು. ರೇಲು ಮಾರ್ಗಗಳ ಸೌಕರ್ಯವಿರುವದು. ಆದರೆ ಮುಂಬಯಿಯಲ್ಲಿ ಇರುವ ಆರ್ದ್ರ ಹವೆಯ ಅನುಕೂಲತೆ ಅಹ್ಮದಾಬಾದಿಗೆ ಇರುವದಿಲ್ಲ. ಇದರಿಂದ ಮುಂಬಯಿಯಷ್ಟು ನಯವಾದ ಬಟ್ಟೆಗಳು ಅಲ್ಲಿ ಆಗಲಾರವು ಇದೇ ಉದ್ಯೋಗದಲ್ಲಿ ಮುಂದುವರಿದ ಮೂರನೆಯ ಪಟ್ಟಣವು ಸೊಲ್ಲಾಪುರವಾಗಿದೆ ವಿಜಾಪೂರ, ಸೊಲ್ಲಾಪೂರ, ಜಿಲ್ಹೆಗಳಲ್ಲಿ ಬೆಳೆಯುವ ಹತ್ತಿಯು ಇಲ್ಲಿಯ ಗಿರಣಿಗಳಿಗೆ ಪೂರೈಕೆಯಾಗುವದು

ಹುಬ್ಬಳ್ಳಿ-ಗದುಗುಗಳಲ್ಲಿಯೂ ಒಂದೊಂದು ಬಟ್ಟೆಯ ಗಿರಣಿಗಳಿವೆ. ಗೋಕಾಕದಲ್ಲಿ ಘಟಪ್ರಭೆಯ ತಡಸಲಿನಿಂದ ನಡೆಯುವ ನೂಲಿನ ಗಿರಣಿಯೊಂದಿದೆ ಸಾಂಗಲಿ, ಈಚಲಕರಂಜಿ, ರಬಕವಿ ನೊದಲಾದ ಊರುಗಳಲ್ಲಿ ಯಂತ್ರಗಳಿಂದ ಮಗ್ಗಗಳನ್ನು ನಡೆಸಿ ಸೀರೆ ವಸ್ತ್ರಲುಗಳನ್ನು ಉತ್ಪಾದಿಸುವರು.

ಈ ರಾಜ್ಯದ ದೊಡ್ಡ ಗಿರಣಿಗಳಲ್ಲಿ ಉತ್ಪನ್ನವಾಗುವ ಬಟ್ಟೆ ದೇಶದ ಬೇಡಿಕೆಯನ್ನು ಪೂರೈಸುವದಲ್ಲದೆ, ಆಫ್ರಿಕ, ಬ್ರಹ್ಮದೇಶ, ಸಿಲೋನ ಮೊದಲಾದ ನೆರೆಯ ದೇಶಗಳಿಗೂ ಕಳಿಸಲ್ಪಡುವದು

## ಸಕ್ಕರೆಯ ಉದ್ಯೋಗ

ಕೆಲವು ವರುಷಗಳ ಹಿಂದೆ ನಮ್ಮ ದೇಶದಲ್ಲಿ ನಕ್ಕರೆಯ ಹುಟ್ಟುವಳಿ ಇರಲಿಲ್ಲ ವಿದೇಶಗಳಿಂದ ನಾವು ಸಕ್ಕರೆಯನ್ನು ತರಿಸಿಕೊಳ್ಳುತ್ತಿದ್ದೆವು ನೀವು ‘ ಮೋರಸ ಸಕ್ಕರೆ ’ ಯೆಂದು ಕರೆಯುವಿರಲ್ಲ? ಅದು ‘ ಮಾರಿಸಸ್ ’ ಎಂಬ ದೂರದ ನಡುಗಡ್ಡೆಯಿಂದ ಬರುವ ನಕ್ಕರೆ ಮಾರಿಸಸ್ ಎಂಬುದೇ ಜನರ ಬಾಯಲ್ಲಿ ‘ ಮೋರಸ್ ’ ಆಗಿ ಉಳಿದಿದೆ ಇದೇ ಮೇರೆಗೆ ‘ ಜಾನ್ಸನ್ ’ ಕಂಪನಿಯವರು ಹಿಂದೆ ಮಾರುತ್ತಿದ್ದ ನಕ್ಕರೆಗೆ, ಇಂದಿಗೂ ಅದನ್ನು ಹೋಲುವ ಸಕ್ಕರೆಗೆ ‘ ಜಾನಸಿ(ನಕ್ಕರೆ ’ ಎಂಬಹೆಸರು ಬಿದ್ದು ಬಿಟ್ಟಿದೆ ಅದನ್ನೇ ನೀವು ಚಹಕ್ಕೆ ಉಪಯೋಗಿಸುವಿರಿ ಇಂದು ನಮ್ಮ ದೇಶದಲ್ಲಿ ಬೇಕಾದಷ್ಟು ಸಕ್ಕರೆ ತಯಾರಾಗುತ್ತಿದೆ. ಬಿಹಾರ, ಉತ್ತರ ಪ್ರದೇಶದಗಳಲ್ಲಿ ನಕ್ಕರೆಯ ಕಾರಖಾನೆಗಳಿವೆ ಮುಂಬಯಿ ರಾಜ್ಯದಲ್ಲಿಯೂ ಕೆಲವು ನಕ್ಕರೆ ಕಾರಖಾನೆಗಳಿವೆ. ಅವುಗಳನ್ನು ನೋಡಲು ನೀವು ಬಯಸುವಿರಲ್ಲವೆ? ನಡೆಯಿರಿ, ಹಾಗಾದರೆ.

ನೀವು ತಿನ್ನುವ ಕಬ್ಬಿನಿಂದಲೆ ಬೆಲ್ಲವನ್ನೂ, ನಕ್ಕರೆಯನ್ನೂ ತಯಾರಿಸುವರೆಂಬುದು ನಿಮಗೆ ಗೊತ್ತಿರಬಹುದು. ಕಬ್ಬು ಬೆಳೆಯುವಲ್ಲಿಯೆ

ಸಕ್ಕರೆಯ ಕಾರಖಾನೆಗಳಿರುವವು. ಕಬ್ಬು ಬೆಳೆಯಲು ಕಸುವುಳ್ಳ ಕರಿಯ ಭೂಮಿ ಬೇಕು. ಸಂತತವಾದ, ಸಮೃದ್ಧವಾದ ನೀರಿನ ಪೂರೈಕೆಯಾಗುತ್ತಿರಬೇಕು. ಉಷ್ಣವಾದ ಹವೆಯಿರಬೇಕು ಸಂತತವಾದ ನೀರಿನ ಪೂರೈಕೆಯು ಮಳೆಯಿಂದಲೆ ಆಗಲಾರದು. ಕಬ್ಬಿನ ಬೆಳೆಗೆ ಮೊಟ್ಟೆಯ ನೀರು ಇಲ್ಲವೆ ಕಾಲುವೆಗಳ ನೀರಾವರಿಯೆ ಆಗತ್ಯವಾದುದು. ಕಾಲುವೆಗಳ ಅನುಕೂಲತೆಯಿರುವಲ್ಲಿ ಕಬ್ಬನ್ನು ಹೆಚ್ಚಿನ ಪ್ರಮಾಣದಿಂದ ಬೆಳೆಯುವರು ಮುಂಬಯಿ ರಾಜ್ಯದಲ್ಲಿ ನಿರಾ, ಪ್ರವರಾ ಮೊದಲಾದ ಕೆಲವು ನದಿಗಳಿಗೆ ಒಡ್ಡು ಹಾಕಿ ನೀರನ್ನು ಸಂಗ್ರಹಿಸಿರುವರು. ಈ ನೀರನ್ನು ಕಾಲುವೆಗಳ ಸಹಾಯದಿಂದ ಸುತ್ತಲಿನ ಪ್ರದೇಶಗಳಿಗೆ ಪೂರೈಸುವರು.



ಆಕೃತಿ ೨೪ ಕಬ್ಬಿನ ಬೆಳೆ

ಮುಂಬಯಿ ರಾಜ್ಯದಲ್ಲಿ ನಗರ ಜಿಲ್ಲೆಯು ಕಬ್ಬಿನ ಬೆಳೆಗಾಗಿ, ಸಕ್ಕರೆಯ ಉತ್ಪತ್ತಿಗಾಗಿ ಮುಂದೆ ಬಂದಿದೆ. ಈ ಜಿಲ್ಹೆಯಲ್ಲಿ ಹರಿದಿರುವ ಪ್ರವರಾನದಿಗೆ ಭಾಂಡಾರದರಾ ಎಂಬಲ್ಲಿ ಒಡ್ಡನ್ನು ಹಾಕಿರುವರು. ಈ ನದಿಯ ಕಾಲುವೆಗಳಿಂದ ಅಹಮ್ಮದನಗರ ಹಾಗೂ ನಾಸಿಕ ಜಿಲ್ಹೆಗಳಿಗೆ ನೀರಿನ ಪೂರೈಕೆಯಾಗುವದು. ಈ ಭಾಗದಲ್ಲಿ ನೀವು ನೋಡಿದಲ್ಲೆಲ್ಲ ಎತ್ತರವಾಗಿ ಬೆಳೆದು ನಿಂತ ಕಬ್ಬಿನ ತೋಟಗಳನ್ನು ಕಾಣಬಹುದು ಒಂದು ಸಮಯ ಬರಗಾಲ ಪೀಡಿತವಾದ ಈ ಜಿಲ್ಹೆಗಳು ಇಂದು ಕಬ್ಬಿನ ತೋಟಗಳಿಂದ ಸಮೃದ್ಧಿಯ ಪ್ರದೇಶಗಳಾಗಿರುವವು. ಕೋಪರಗಾಂವ ಬೇಲಾಪೂರ ಮೊದಲಾದ, ಊರು

ಳು ಸಕ್ಕರೆಯ ಗಿರಣಿಗಳಿಂದ ಮುಂದೆ ಬಂದಿರುವವು. ಪುಣೆ ಜಿಲ್ಹೆಯಲ್ಲಿ ಬುರಾ ನದಿಗೆ ಖಡಕವಾಸಲೆ ಎಂಬಲ್ಲಿ ಒಡ್ಡನ್ನು ಹಾಕಿ ಜಿಲ್ಹೆಯ ಪೂರ್ವ ಭಾಗಕ್ಕೆ ನೀರಿನ ಪೂರೈಕೆಯನ್ನು ಮಾಡಿರುವರು ನೀರಾ ನದಿಗೆ ಭಾಟಗರ ಎಂಬಲ್ಲಿ ಒಡ್ಡನ್ನು ಹಾಕಿರುವದರಿಂದ ಪುಣೆ, ಉತ್ತರ ಸಾತಾರಾ ಹಾಗೂ ಸೊಲ್ಲಾಪೂರ ಜಿಲ್ಹೆಗಳ ಕೆಲವು ಭಾಗಗಳಿಗೆ ನೀರಿನ ಪೂರೈಕೆಯಾಗಿರುವದು. ಸಾತಾರೆ ಜಿಲ್ಹೆಯ ಫಲಟಣ, ಸೊಲ್ಲಾಪೂರ ಜಿಲ್ಹೆಯ ಕಳಂಬ, ಅಕ್ಲೂಜ ಮೊದಲಾದ ಊರುಗಳಲ್ಲಿ ನಕ್ಕರೆಯ ಗಿರಣಿಗಳಾಗಿವೆ ಗಿರಣಿಗಳಿರುವ ಈ ಭಾಗವು ‘ ಸಾಖರವಾಡಿ ’ ಎಂತಲೇ ಕರೆಯಲ್ಪಡುತ್ತಿದೆ ಕೊಲ್ಹಾಪೂರ ದಲ್ಲಿಯೂ ನಕ್ಕರೆಯ ಗಿರಣಿಯಿದೆ

ಮುಂಬಯಿ ಕರ್ನಾಟಕದಲ್ಲಿ ಕೃಷ್ಣಾನದಿಯ ದಂಡೆಗುಂಟ ಇರುವ ಊರುಗಳಾದ—ಉಗಾರ ಹಾಗೂ ಹೊಸೂರ ಎಂಬಲ್ಲಿ ಸಕ್ಕರೆಯ ಕಾರಖಾನೆ ಗಳು ಪ್ರಾರಂಭವಾಗಿವೆ ಸರಕಾರವು ಯೋಜನೆ ಮಾಡಿರುವ ಕೋಯನಾ ನದಿಯ ಒಡ್ಡು ಪೂರ್ತಿಯಾದರೆ ಮಹಾರಾಷ್ಟ್ರದಲ್ಲಿಯೂ ಕರ್ನಾಟಕದ ವಿಜಾಪೂರ ಜಿಲ್ಹೆಯಲ್ಲಿಯೂ ನೀರಿನ ಸಮೃದ್ಧಿಯಾಗುವದರಿಂದ ಕಬ್ಬಿನ ತೋಟಗಳು ಹೆಚ್ಚಾಗಬಹುದು ಕಬ್ಬಿನಿಂದ ಸಕ್ಕರೆಯನ್ನು ಮಾಡುವದಲ್ಲದೆ, ಬೆಲ್ಲವನ್ನೂ ಮಾಡುವರೆಂಬುದು ನಿಮಗೆ ಗೊತ್ತಿದೆ

ಮುಂಬಯಿ ರಾಜ್ಯದಲ್ಲಿ ಇನ್ನೊಂದು ಮಹತ್ವದ ಉದ್ಯೋಗವು ಪ್ರಾರಂಭವಾಗಿದೆ ದೊಡ್ಡ ದೊಡ್ಡ ಊರುಗಳಲ್ಲಿ ಸಿಮೆಂಟು ರಸ್ತೆಗಳನ್ನು ನೀವು ನೋಡಿರುವಿರಿ ಸುಂದರವಾದ ಸಿಮೆಂಟಿನ ಕಟ್ಟಡಗಳೂ ನಿಮಗೆ ಸುತ್ತಲೂ ಕಾಣುವವು ಇಂದು ನದಿಗಳಿಗೆ ಕಟ್ಟಬೇಕೆನ್ನುವ ಒಡ್ಡುಗಳಿಗ ಬಹಳ ಪ್ರಮಾಣದಲ್ಲಿ ಸಿಮೆಂಟು ಬೇಕಾಗುವದು ಸಿಮೆಂಟಿನ ತಯಾರಿಕೆಗೆ ಸುಣ್ಣದ ಹರಳುಗಳು ಮುಖ್ಯವಾಗಿ ಬೇಕು ಮುಂಬಯಿ-ಕರ್ನಾಟಕದ ವಿಜಾಪೂರ ಜಿಲ್ಹೆಯ ಬಾಗಿಲುಕೋಟೆಯ ನೆರೆಯಲ್ಲಿ ಸುಣ್ಣದ ಕಲ್ಲಿನ ಕಣಿಗಳಿರುವವು. ಮುಂಬಯಿ ಸರಕಾರದ ಧನಸಹಾಯದಿಂದ ಬಾಗಿಲುಕೋಟೆ ಯಲ್ಲಿ ಒಂದು ದೊಡ್ಡ ಸಿಮೆಂಟಿನ ಕಾರಖಾನೆಯು ಪ್ರಾರಂಭವಾಗಿದೆ ಮುಂಬಯಿ ರಾಜ್ಯದ ಸಿಮೆಂಟಿನ ಕೊರತೆಯನ್ನು ಈ ಕಾರಖಾನೆಯು ಕಡಿಮೆ ಮಾಡುವದು.

ಇನ್ನೂ ಬೇರೆ ಕೆಲವು ಮಹತ್ವದ ಉದ್ಯೋಗಗಳೂ ಈ ರಾಜ್ಯದಲ್ಲಿ ನಡೆಯುವದುಂಟು ಕಿರ್ಲೋಸ್ಕರವಾಡಿ, ಸಾತಾರೆಗಳಲ್ಲಿ ಕಬ್ಬಿಣದ

ಕಾರಖಾನೆಗಳಿರುವವು ಓಗಲೆವಾಡಿ, ತಳೆಗಾಂವಗಳಲ್ಲಿ ಕಾಜಿನ ಕಾರಖಾನೆಗಳಿರುವವು. ಅಂಬರನಾಥ, ಕರ್ಡ್ಡಾಡಗಳಲ್ಲಿ ಕಡ್ಡಿೀಪೆಟ್ಟಿಗೆಯ ಕಾರಖಾನೆಗಳಿರುವವು. ಪುಣೆಯ ಸಮೀಪದಲ್ಲಿ ಮುಂಡವಾ ಎಂಬಲ್ಲಿ ಕಾಗದದ ಕಾರ-ಖಾನೆಯಿರುವದು. ಈ ರಾಜ್ಯದ ಭಾಗವಾದ ಮಲೆನಾಡಿನ ಅಡವಿಗಳಲ್ಲಿ ಕಾಗದ ತಯಾರಿಕೆಗೆ ಬೇಕಾಗುವ ಹುಲ್ಲು, ಬಿದಿರು, ಮಿದುವಾದ ಕಟ್ಟಿಗೆಗಳು ವಿಪುಲವಾಗಿ ದೊರೆಯುವವು. ಕಾಗದದ ಉದ್ಯೋಗವು ದೊಡ್ಡ ಪ್ರಮಾಣದಿಂದ ನಡೆಯಲು ಇಲ್ಲಿ ಬೇಕಾದಷ್ಟು ಅನುಕೂಲತೆಯಿರುವದು

## ಅಭ್ಯಸನಗಳು

೧ ಮುಂಬಯಿ ರಾಜ್ಯದಲ್ಲಿ ನಡೆಯುವ ಎರಡು ಮುಖ್ಯ ಉದ್ಯೋಗಗಳು ಯಾವು? ಭೂಗೋಲದ ಸಂಗತಿಗಳನ್ನು ಇವು ಹೇಗೆ ಅವಲಂಬಿಸಿವೆ ?

೨ 'ಬಟ್ಟೆ ಗಿರಣಿಗಳಿಂದಲೇ ಮುಂಬಯಿನಗರವು ಮುಂದ ಬಂದಿದೆ'—ಇದು ಹೇಗೆ ನಿಜವೆಂಬುದನ್ನು ತಿಳಿಸಿರಿ

೩ ಕರ್ನಾಟಕದಲ್ಲಿ ಬಟ್ಟೆ ಗಿರಣಿಗಳನ್ನು ಎಲ್ಲಿ ಕಾಣುವಿರಿ ? ಅವುಗಳಿಗೆ ಅಲ್ಲಿ ಇರುವ ಅನುಕೂಲತೆ ಯಾವು ?

೪ ಈ ರಾಜ್ಯದಲ್ಲಿ ಸಕ್ಕರೆ ಕಾರಖಾನೆಗಳಿರುವ ಊರುಗಳನ್ನು ನೀವೇ ತೆಗೆದಿರುವ ನಕಾಶದಲ್ಲಿ ತೋರಿಸಿರಿ ಈ ಕಾರಖಾನೆಗಳಿಗೆ ಕಬ್ಬಿನ ಪೂರೈಕೆ ಹೇಗಾಗುವದೆಂಬುದನ್ನು ಬುಡದಲ್ಲಿ ಬರೆಯಿರಿ

೫ ಬಾಗಿಲುಕೋಟೆಯು ಸಿಮೆಂಟಿನ ಕೇಂದ್ರವಾಗಲು ಕಾರಣವೇನು ?

೬ ಕನ್ನಡನಾಡಿನ ಭಾಗವಾದ ಕಾರವಾರ ಜಿಲ್ಹೆಯಲ್ಲಿ ಯಾವ ಉದ್ಯೋಗವನ್ನು ಪ್ರಾರಂಭಿಸಲು ಬರುವಂತಿದೆ ? ಏಕೆ ?

೭ ಒಂದು ಪ್ರದೇಶದ ಉದ್ಯೋಗಗಳು ಭೂಗೋಲದ ಯಾವ ಸಂಗತಿಗಳನ್ನು ಅವಲಂಬಿಸಿರುವವು ?

ಪ್ರಕರಣ ೧೦

# ಈ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ವಾಸಿಸುವ ಜನರ ಜೀವನಕ್ರಮ

ಇದುವರೆಗೆ ನೀವು ಮುಂಬಯಿ ರಾಜ್ಯದ ಸಾಮಾನ್ಯ ಸ್ವರೂಪವನ್ನು ತಿಳಿದುಕೊಂಡಿರುವಿರಿ ಹವೆ, ಮಳೆ, ಬೆಳೆ ಮೊದಲಾದ ಅನೇಕ ವಿವರಗಳ ಪರಿಚಯವನ್ನೂ ಮಾಡಿಕೊಂಡಿರುವಿರಿ ಎಷ್ಟೊಂದು ವಿವಿಧತೆ, ವ್ಯತ್ಯಾಸಗಳು ನಿಮಗೆ ಕಂಡುಬಂದಿರಬಹುದು! ಇವುಗಳೆಲ್ಲ ಇಲ್ಲಿಯ ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ ಬೇರೆ ಬೇರೆ ಭಾಗಗಳಲ್ಲಿಯ ಜನಜೀವನವು ಪರಿಸ್ಥಿತಿಗೆ ಹೊಂದಿಕೊಂಡು ಭಿನ್ನವಾಗಿವೆ

## ಕರ್ನಾಟಕದ ಜನಜೀವನ

ಕರ್ನಾಟಕವು ನಮ್ಮ ನಾಡು ನಮ್ಮ ನಾಡು, ನಮ್ಮ ಜನ, ನಮಗೆ ಅರಿಯದವರೆ? ಇವರ ಬಗ್ಗೆ ಏನು ತಿಳಿದುಕೊಳ್ಳುವದು? ಎಂದು ನೀವು ಕಡೆಗಣಿಸಬಾರದು ಇವೆಲ್ಲವುಗಳ ಬಗ್ಗೆ ಇನ್ನೂ ನಿಮಗೆ ಗೊತ್ತಿರದ ಅನೇಕ ಸಂಗತಿಗಳಿರುವವು.

## ಬೆಳವಲು ನಾಡಿನಲ್ಲಿ

ಮಲೆನಾಡು ಸೆರಗಿನಿಂದ ಪೂರ್ವಕ್ಕೆ ಹಬ್ಬಿದ ತಪ್ಪಲು ಪ್ರದೇಶವೆ ಬೆಳವಲನಾಡು ಇಲ್ಲಿಯ ಭೂಮಿಯು ಹೆಸರಿಗೆ ತಕ್ಕಂತೆ ಬೆಳೆಯುಳ್ಳದ್ದು. ಆದರೆ ಮಳೆಯು ಕಡಿಮೆ, ಹಾಗೂ ಅನಿಶ್ಚಿತವಾದುದು ಬರಗಾಲ ಭಯವು ಬಹಳ ತುಸು ಚಳಿ, ಪ್ರಖರವಾದ ಬಿಸಿಲು ಹವೆಯು ಆರೋಗ್ಯಕರವಾದುದು ರೋಗರುಜಿನಗಳು ಕಡಿಮೆ ಜನರು ಆರೋಗ್ಯವಂತರು, ಗಟ್ಟಿಗರು ಬಿಸಿಲಿನಿಂದ ಮೈ ಬಣ್ಣ ಗೋದಿಗೆಂಪು, ತುಸು ಕಪ್ಪೆಂದರೂ ಸಲ್ಲುವದು. ಬಟ್ಟೆಗಳು ಹೆಚ್ಚಿಗೆ ಬೇಡ 'ರುಮಾಲ' ಬೆಳವಲು ನಾಡಿನ ಚಿನ್ಹವೆನ್ನಬಹುದು. ಮಣ್ಣು ಕಲ್ಲಿನ ಮಾಳಿಗೆಯ ಮನೆಗಳೇ ಹೆಚ್ಚು. ಬೇಸಿಗೆಯಲ್ಲಿ ಬಯಲಿನಲ್ಲಿಯೇ ಮಲಗಬೇಕಾಗುವದು.



ಆಕೃತಿ ೨೫ ಬೆಳವಲ ನಾಡಿನ ಒಕ್ಕಲಿಗ

ಒಕ್ಕಲುತನವೇ ಇಲ್ಲಿಯ ಜನರ ಮುಖ್ಯ ಉದ್ಯೋಗ. ಹತ್ತಿಯು ಬೆಳೆಯುವದರಿಂದ,

ನೂಲುವ, ನೇಯುವ ಕೈಗಾರಿಕೆಯು ಇಲ್ಲಿ ಮೊದಲಿನಿಂದಲೂ ನಡೆದು ಬಂದಿದೆ. ಎಣ್ಣೆಕಾಳುಗಳನ್ನು ಬೆಳೆಯುವದರಿಂದ ಊರಿಗೊಂದು ಎಣ್ಣೆಯ ಗಾಣವಿರುವದು

ಇಲ್ಲಿಯ ಜನರು, ರಸಿಕರು ಉತ್ಸಾಹಿಗಳು ಇವರ ಉತ್ಸಾಹವು ಕೊನೆಯವರೆಗೂ ಉಳಿದರೆ ಒಳ್ಳೇ ಕಾರ್ಯವನ್ನು ಮಾಡಬಲ್ಲರು. ಹಬ್ಬ-ಹುಣ್ಣಿಮೆಗಳಲ್ಲಿ ಇವರಿಗೆ ಪ್ರೀತಿ ಬಹಳ ಅತಿಥಿ ಸತ್ಕಾರದಲ್ಲಿ ಹೆಸರಾದವರು. ಧರ್ಮದಲ್ಲಿ ಶ್ರದ್ಧೆಯುಳ್ಳವರು, ಭಕ್ತಿವಂತರು ಹಿಂದಿನ ಆಚಾರಗಳನ್ನೂ, ರೂಢಿಗಳನ್ನೂ ತಪ್ಪದೇ ಇವರು ಪಾಲಿಸುತ್ತ ಬಂದಿರುವರು. ನವರಾತ್ರಿಯು ಈ ಭಾಗದಲ್ಲಿ 'ನಾಡಹಬ್ಬ' ವಾಗಿದೆ

## ಮಲೆನಾಡ ಸೆರಗಿನಲ್ಲಿ

ಮಲೆನಾಡು ಬೆಳವಲು ನಾಡುಗಳ ಅಂಚುಗಳು ಹೊಂದಿಕೊಂಡಿರುವ ನಡುವಿನ ಪಟ್ಟಿಯೇ ಮಲೆನಾಡ ಸೆರಗು ಧಾರವಾಡ, ಬೆಳಗಾಂವಿ ಹಾಗೂ ಕಾರವಾರ ಈ ಮೂರು ಜಿಲ್ಹೆಗಳ ಕೆಲವು ತಾಲೂಕಗಳು ಮಲೆನಾಡ ಸೆರಗಿನಲ್ಲಿ ಬರುವವು. ನಿಶ್ಚಿತವಾದ ಸು ೫೦ ಇಂಚುಗಳಷ್ಟು ಮಳೆ ಬೆಳೆಯುಳ್ಳ ಭೂಮಿ ಇಲ್ಲಿಯ ಜನರಿಗೆ ಬರಗಾಲದ ಭಯವಿಲ್ಲ ಒಕ್ಕಲುತನವೇ ಜನರ ಮುಖ್ಯ ಉದ್ಯೋಗ ಇಲ್ಲಿಯ ರೈತರು ಎರಡೆರಡು ಬೆಳೆಗಳನ್ನು ತೆಗೆದುಕೊಂಡು ಒಳ್ಳೇ ಸ್ಥಿತಿಯಲ್ಲಿ ಇರುವರು ಹವೆಯು ಅಷ್ಟೊಂದು ಆರೋಗ್ಯಕರವಲ್ಲ ರೋಗ ರುಜಿನಗಳು ಬಹಳ ಬೇಸಿಗೆಯಲ್ಲಿ ಹವೆಯು ತಂಪಾಗಿಯೂ, ಹಿತಕರವಾಗಿಯೂ ಇರುವದು ಇವರ ಮನೆಗೆ ಇಳುಕಲಿನ ಚಪ್ಪರಗಳು ಬೇಕು ಅಕ್ಕಿಯೇ ಜನರ ಮುಖ್ಯ ಆಹಾರವಾಗಿದೆ

## ಮಲೆನಾಡಿನಲ್ಲಿ

ಮುಂಬಯಿ ಕರ್ನಾಟಕದಲ್ಲಿ ಮಲೆನಾಡಿನ ಪ್ರತ್ಯಕ್ಷವಾದ ಭಾಗವು ತೀರಕಡಿಮೆ ಕಾರವಾರ ಜಿಲ್ಹೆಯಲ್ಲಿ ಹಬ್ಬಿದ ಬೆಟ್ಟದ ಭಾಗದಲ್ಲಿ ಮಾತ್ರ ಮಲೆನಾಡಿನ ಜೀವನವನ್ನು ನೀವು ನೋಡಬಹುದು. ಇಲ್ಲಿಯ ಜೀವನ ಕ್ರಮವು ಬದಲಾಗಿಲ್ಲ ಹಿಂದಿನಂತೆಯೇ ನಾಗಿಬಂದಿರುವದು. ಬೆಟ್ಟ ಕಾಡುಗಳ ಕುತ್ತುಗಳನ್ನೆಲ್ಲ ಇವರು ಎದುರಿಸಬೇಕು ಸೃಷ್ಟಿಸೌಂದರ್ಯವು ಇಲ್ಲಿ ತುಂಬಿ ತುಳುಕುತ್ತಿದೆ ಹನ್ನೆರಡು ತಿಂಗಳೂ ಹಸಿರು ಹೂಕಾಯಿ

ಗಳಿಂದ ಶೋಭಿಸುವ ಗಿಡಗಂಟಿಗಳು ಮಳೆ ಬಹಳ. ಮಲೆತು ನಿಂತ ನೀರಿನಿಂದ ಯಾವಾಗಲೂ ಮಲೇರಿಯಾದ ಉಪದ್ರವ. ಇದರಿಂದ ಜನರು ದುರ್ಬಲರಾಗುವರು ಕಾಡಿನಲ್ಲಿ ದೂರದೂರದ ಒಂದೇ ಗುಡಿಸಿಲಿನಲ್ಲಿ ಇವರು ವಾಸಿಸುವರು ಹತ್ತೆಂಟುಗುಡಿಸಲು ಕೂಡಿಕೊಂಡು ಒಂದು ಹಳ್ಳಿಯೆನಿಸುವದು. ಅಕ್ಕಿ, ತೆಂಗು, ಕಾಯಿಪಲ್ಲೆ ಇಲ್ಲಿಯ ಜನರಿಗೆ ಮುಖ್ಯ ಆಹಾರ ಮಾವು, ಹಲಸು, ಬಾಳೆ ಸಮೃದ್ಧವಾಗಿ ಬೆಳೆಯುವವು ಮಾಂಸ ತಿನ್ನುವವರಿಗೆ ಕಾಡಿನಲ್ಲಿ ಬೇಟೆ ದೊರೆಯುವದು. ಕಾಡಾನೆ, ಹುಲಿ ಮೊದಲಾದ ಕಾಡು ಮೃಗಗಳ ಪೀಡೆಯು ಇವರಿಗೆ ನಿತ್ಯವೂ ಇರುವದು. ತಮ್ಮ ದನಕರುಗಳನ್ನೂ, ಶ್ರಮದಿಂದ ಬೆಳೆಯಿಸಿದ ಬೆಳೆಗಳನ್ನೂ ರಕ್ಷಿಸಿಕೊಳ್ಳುವದೇ ಇವರಿಗೆ ಕಠಿಣವಾಗುವದು

## ಕರಾವಳಿಯ ಪ್ರದೇಶದಲ್ಲಿ

ಕರ್ನಾಟಕದ ಜಿಲ್ಹೆಯಾದ ಕಾರವಾರವು ಕರಾವಳಿಯ ಪ್ರದೇಶವಾಗಿದೆ ಕೊಂಕಣಪಟ್ಟಿಯ ಒಂದು ಭಾಗವಾಗಿದೆಯೆಂಬುದನ್ನು ನಕಾಶದಲ್ಲಿ ನೀವು ನೋಡಿರುವಿರಿ ಸಮುದ್ರತೀರದ ಆರ್ದ್ರ ಹವೆ, ವಿಪುಲವಾದ ಮಳೆ, ಭೂಮಿಯ ಕೊರತೆ ಇವುಗಳಿಂದ ಇಲ್ಲಿಯ ಜನರ ಜೀವನವು ಬೇರೊಂದು ರೀತಿಯದಾಗಿರುವದು ಹೊರನಾಡುಗಳ ಕೂಡ ಸಾರಿಗೆ ಸಂಪರ್ಕಗಳು ಕಡಿಮೆ ಮಳೆಗಾಲದ ಮೂರು ತಿಂಗಳು ಮನೆ ಹಿಡಿದುಕೊಂಡು ಕೂಡಬೇಕು. ಗೇಣಗಲದ ತುಂಡು ಗದ್ದೆಗಳಲ್ಲಿ ಭತ್ತ ಬೆಳೆದುಕೊಳ್ಳುವರು. ಉಳಿದ ತಿಂಗಳುಗಳಲ್ಲಿ ಮೀನ ಹಿಡಿಯಬೇಕು. ಅಕ್ಕಿ, ಮೀನ ಇವು ಮುಖ್ಯವಾದ ಆಹಾರ ಹೈನವು ತೀರ ಕಡಿಮೆ. ಬೇಸಾಯಕ್ಕೆ ಎತ್ತುಗಳ ಬದಲಾಗಿ ಕೋಣಗಳನ್ನು ಹೂಡುವರು ಚಪ್ಪರದ ಮನೆಗಳಿಗೆ ವರುವರುಷವೂ ಹೊಸ ಹುಲ್ಲು ಹಂಚುಗಳನ್ನು ಹಾಕಬೇಕು.

ಜನರು ಗಟ್ಟಿಗರಲ್ಲ. ನಿಷ್ಠಾವಂತರು ಹಾಗು ತಮ್ಮ ಕೆಲಸಗಳನ್ನು ದಕ್ಷತೆಯಿಂದ ಮಾಡುವವರು. ಇವರ ಭಾಷೆ ಕನ್ನಡ ಶಿಕ್ಷಣದಲ್ಲಿ ಮುಂದೊರದವರು, ಸರಕಾರದ ನೌಕರಿಗಳಲ್ಲಿ ಹೆಸರು ಪಡೆದವರು ಗೋವೆಯ ಪ್ರಾಂತದಿಂದ ಬಂದು ಇಲ್ಲಿ ಇವರು ನೆಲೆಸಿರುವರೆಂದು ಹೇಳುವದುಂಟು. ಇಲ್ಲಿಯ ಮೂಲನಿವಾಸಿಗಳಾದ 'ಹಾಲಕ್ಕಿ ಒಕ್ಕಲು' ಎಂಬ ಒಂದು ಜನಾಂಗವಿದೆ ಇವರಲ್ಲಿ ಹೆಣ್ಣುಮಕ್ಕಳು ಎದೆತುಂಬ ಕರಿಮಣಿಸರಗಳನ್ನು ಹಾಕಿಕೊಳ್ಳುವರು ಹಿಂದಿನ ಸಂಪ್ರದಾಯಗಳನ್ನು ಇವರು ಇನ್ನೂ ಕಾಯ್ದು

ಕೊಂಡಿರುವರು. ಸ್ವಾತಂತ್ರ್ಯದ ಚಳುವಳಿಯಲ್ಲಿ ಇವರು ಹೆಚ್ಚಿನ ತ್ಯಾಗ, ನಿಷ್ಠೆಗಳನ್ನು ತೋರಿಸಿರುವರು.



ಆಕೃತಿ ೨೬ ಕರಾವಳಿ ಪ್ರದೇಶದ ಒಂದು ದೃಶ್ಯ

ಕನ್ನಡನಾಡಿನ ಬಹುಮುಖವಾದ ಜನಜೀವನವನ್ನು ನೀವು ನೋಡಿದಿ ನಿಮಗೆ ಅನೇಕ ಹೊಸ ಸಂಗತಿಗಳ ಜ್ಞಾನವಾಯಿತು. ನಮ್ಮ ನಾಡಿ ಜನರ ಆಹಾರ, ಬಟ್ಟೆ ಹಾಗೂ ಉದ್ಯೋಗಗಳು ಆ ಪ್ರದೇಶಗಳ ಹವೆ, ಮಳೆ, ಬೆಳೆಗಳ ಮೇಲೆ ಎಷ್ಟೊಂದು ಅವಲಂಬಿಸಿವೆ ಎಂಬುದು ನಿಮಗೆ ಕಂಡು ಬಂದಿರಬಹುದು.

## ಮಹಾರಾಷ್ಟ್ರದಲ್ಲಿ

ಮಹಾರಾಷ್ಟ್ರವು ನಮ್ಮ ನೆರೆಯ ನಾಡು. ಅಲ್ಲಿಯ ಜನರು ನಮ್ಮ ನೆರೆ ಹೊರೆಯವರು ಅನೇಕ ಮಹಾರಾಷ್ಟ್ರ ಮನೆತನಗಳು ಕನ್ನಡ ನಾಡಿನಲ್ಲಿ

ನೆಲೆಸಿವೆ, ನಮ್ಮೊಡನೆ ಕೂಡಿಕೊಂಡುಬಿಟ್ಟವೆ. ಮಹಾರಾಷ್ಟ್ರದಲ್ಲಿ 'ಕೊಂಕಣ' ಹಾಗೂ 'ದೇಶ' ವೆಂಬ ಎರಡು ಮುಖ್ಯ ಭಾಗಗಳು.

## ಕೊಂಕಣದ ಜನರು

ಸಮುದ್ರ ತೀರದ ಪ್ರದೇಶ ಅತಿಶಯವಾದ ಮಳೆ. ಭೂಮಿಯ ಕೊರತೆ. ಕಾರವಾರ ಜಿಲ್ಹೆಯಲ್ಲಿ ನೀವು ನೋಡಿದ ಸಂಗತಿಗಳೆ ಒಟ್ಟು ಕೊಂಕಣ ಪ್ರದೇಶದಲ್ಲಿ ನೆಲೆಸಿರುವವು. ತರಗೆಲೆ, ಕಸಕಡ್ಡಿಗಳನ್ನು ಸುಟ್ಟು ಇಲ್ಲಿಯ ಜನರು ತಮ್ಮ ತುಂಡುಗದ್ದೆಗಳನ್ನು ಹದ ಗೊಳಿಸುವರು. ಸುರಿಯುವ ಮಳೆ, ಕೆಸರಿನಲ್ಲಿ ಇವರು ಕೆಲಸ ಮಾಡುವರು. ತಲೆಯ ಮೇಲೆ ಕಂಬಳಿ ಇಲ್ಲವೆ ತೆಂಗಿನ ಗರಿಯ ಟೊಪ್ಪಿಗೆ ಒಂದು ಲಂಗೋಟ, ತಲೆಗೆ ಸುತ್ತಿದ ಒಂದು ಅರಿವೆಯ ತುಣುಕು. ಹೆಚ್ಚಿಗೆ ಬಟ್ಟೆಗಳೇ ಇವರಿಗೆ ಬೇಕಾಗುವದಿಲ್ಲ. ಇವರ ಮೈಕಟ್ಟು ಬಡಕಲವಾದರೂ ಕೆಲಸಕ್ಕೆ ಗಟ್ಟಿಗರು ಅಕ್ಕಿ, ಮೀನುಗಳೇ ಮುಖ್ಯ ಆಹಾರ ಹೈನ ತೀರ ಕಡಿಮೆ ಬೇಸಾಯಕ್ಕಾಗಿ ಕೋಣಗಳನ್ನು ಹೂಡುವರು. ಇಲ್ಲವೇ, ಹೊಲದಲ್ಲಿ ಎಲ್ಲ ಕೆಲಸಗಳನ್ನು ಕೈಯಿಂದಲೇ ಮಾಡುವರು ಮನೆಯ ಇಳಿಜಾರಾದ ಚಪ್ಪರಗಳಿಗೆ



ಆಕೃತಿ ೨೭ ಕರಾವಳಿ ಪ್ರದೇಶದ ಮೀನಗಾರನು

ಭತ್ತದ ಹುಲ್ಲನ್ನು ಹೊಚ್ಚುವರು. ಸುತ್ತಲೂ ಒಂದು ಕೈದೋಟ ಹಲಸು, ಮಾವು, ತೆಂಗು, ಬಾಳೆ ಹಾಗೂ ಅಡಿಕೆ ಗಿಡಗಳನ್ನು ಅಲ್ಲಿ ಹಚ್ಚುವರು. ಸಮುದ್ರದ ದಂಡೆಯಲ್ಲಿ ಬೆಸ್ತರು ಮೀನಗಾರಿಕೆ ಮಾಡುವರು ಎಷ್ಟು ದುಡಿದರೂ ಇಲ್ಲಿಯ ಜನರಿಗೆ ಹೊಟ್ಟೆತುಂಬಿಕೊಳ್ಳುವದೇ ಕಠಿಣವಾಗುವದು. ಆದಕ್ಕಾಗಿ ಅವರು ಮುಂಬಯಿ ಮೊದಲಾದ ಪಟ್ಟಣಗಳಿಗೆ ದುಡಿಯಲು ಹೋಗುವರು

## ಮಾವಳೇ ಜನರು

ಸಹ್ಯಾದ್ರಿಯ ಗುಡ್ಡಗಾಡುಗಳಲ್ಲಿ ಮಹಾರಾಷ್ಟ್ರದ ಇನ್ನೊಂದು ಬಗೆಯ ಜನಜೀವನವನ್ನು ನಾವು ನೋಡಬಹುದು ಇಲ್ಲಿ ವಾಸಿಸುವವರು ಮಾವಳೇ ಜನರು. ಇವರ ಜೀವನವಾದರೂ ಕಷ್ಟಮಯವಾದುದು ಇವರ ನಿಲುವಿಕೆಯು ಸಾಧಾರಣ ಆದರೆ ಇವರು ಒಳ್ಳೇ ಬಲಿಷ್ಟರು, ಶೂರರು, ಸಾಹಸಿಗರು, ನಂಬಿದವರಿಗಾಗಿ ಪ್ರಾಣಕೊಡಲು ಸಿದ್ಧರು ರಾಜ್ಯ ಕಟ್ಟುವ ಕಾರ್ಯದಲ್ಲಿ ಶ್ರೀ ಶಿವಛತ್ರಪತಿಗೆ ಇವರು ಬಲಗೈಯಂತಿದ್ದರು ಒಂದು ಲಂಗೋಟಿ, ತಲೆಗೆ ಸುತ್ತಿದ ಅರಿವೆ, ಹೆಗಲಮೇಲೊಂದು ಕಂಬಳಿ—ಇವರ ಬಟ್ಟೆಯಾಯಿತು. ಕೈಯಲ್ಲಿ ಗೆಜ್ಜೆಕಟ್ಟಿದ ಕೋಲು, ಕಾಲಲ್ಲಿ ದಪ್ಪವಾದ ಕೆರವುಗಳು ಅಕ್ಕಿ, ಗೋದಿ ಹಾಗೂ ಮಾಂಸ ಇವೇ ಇವರ ಮುಖ್ಯ ಆಹಾರ ಗಂಡಸರಂತೆ, ಇಲ್ಲಿಯ ಹೆಣ್ಣುಮಕ್ಕಳು ಗಟ್ಟಿಗರು, ಹೆದರಿಕೆಯಿಲ್ಲದವರು ಮಾವಳೇ ಜನರು ಬೆಟ್ಟಗಳಲ್ಲಿ ಕಟ್ಟಿಗೆ ಕಡಿಯುವರು, ಬೇಟೆಯಾಡುವರು ಕೆಲವರು ಭತ್ತದ ಗದ್ದೆಗಳಲ್ಲಿ ದುಡಿಯುವರು ಅನೇಕರು ಭಾರತದ ಸೈನ್ಯದಲ್ಲಿ ಕೂಡ ಸೇರಿರುವರು

## ವರಲೀ ಜನರು

ಮಾವಳೇ ಜನರನ್ನು ಹೋಲುವ ಇನ್ನೊಂದು ಬಗೆಯ ಜನರು ಮುಂಬಯಿಯ ನೆರೆಯಲ್ಲಿ ಇರುವರು. ಇವರಿಗೆ 'ವರಲೀ' ಜನರೆನ್ನುವರು ಇವರ ಜೀವನವು ಅಷ್ಟೊಂದು ಕಾಡು ಎನಿಸದು. ಈ ಜನರು ಗಟ್ಟಿಗರಲ್ಲ. ಇವರು ಆಡುವ "ವರಲೀ" ಭಾಷೆ ಮರಾಠಿಯನ್ನೇ ಹೋಲುವದು. ಇವರ ಬಟ್ಟೆ ಕೊಂಕಣೀ ಜನರಂತೆ. ಇವರ ಶರೀರವು ಬಡಕಲವಾಗಿದೆ ಅಕ್ಕಿ, ಮೀನ ಹಾಗೂ ಮಾಂಸಗಳೇ ಇವರಿಗೆ ಮುಖ್ಯವಾದ ಆಹಾರ ಈ ಜನರಲ್ಲಿ ಸ್ವಚ್ಛತೆ ಕಡಿಮೆ ಚಿಕ್ಕ ಗುಡಿಸಲುಗಳೇ ಮನೆಗಳು. ಠಾಣಾ ಜಿಲ್ಹೆಯಲ್ಲಿ ಈ ಜನರು ನೆಲೆಸಿರುವರು. ಹಣ್ಣು ಹಂಪಲದ ತೋಟಗಳಲ್ಲಿ ಹಾಗೂ ಮುಂಬಯಿಯ ಗಿರಣಿಗಳಲ್ಲಿ ದುಡಿಯುವದು ಇವರ ಉದ್ಯೋಗಗಳಾಗಿವೆ. ಈ ಜನರನ್ನು ಸುಧಾರಿಸುವದಕ್ಕಾಗಿ ಶ್ರೀ ಠಕ್ಕರ ಬಾಪ್ಪಾ ಮೊದಲಾದವರು ಒಳ್ಳೇ ಶ್ರಮಪಟ್ಟಿರುವರು.

## ತಪ್ಪಲಿನ ಭಾಗವಾದ ಮಹಾರಾಷ್ಟ್ರ, (ದೇಶ)ದಲ್ಲಿ

ಸಹ್ಯಾದ್ರಿಯ ಪೂರ್ವದ ತಪ್ಪಲು ಪ್ರದೇಶಕ್ಕೆ ಮಹಾರಾಷ್ಟ್ರ 'ದೇಶ' ವೆಂಬ ಹೆಸರು. ಘಟ್ಟಗಳ ಮುಖಾಂತರವಾಗಿಯೆ ಕೊಂಕಣದಿಂದ 'ದೇಶಕ್ಕೆ'

ಹೋಗಬೇಕು ಕೊಂಕಣ ಹಾಗೂ ದೇಶಗಳ ಜನಜೀವನದಲ್ಲಿ ಒಳ್ಳೇ ಅಂತರವಿದೆ ಈ ಭಾಗದಲ್ಲಿ ಖಾನದೇಶವೇ ಹೆಚ್ಚು ಫಲವತ್ತಾದುದು. ಇದು ಸಮೃದ್ಧವಾದ ದೇಶ ಆರೋಗ್ಯಕರವಾದ ಹವೆ. ಜನರು ನಿಲುವಿಕೆಯಲ್ಲಿ ಎತ್ತರ ಜಟ್ಟಿಗಳಂತೆ ತುಂಬಿದ ಮೈಕಟ್ಟು. ಸಾದಾ ಉಡುವು ಮಹಾರಾಷ್ಟ್ರದ ಉಳಿದ ಭಾಗಗಳಂತೆ ಜನರು ಆಡುವ ಭಾಷೆ ಮರಾಠಿ ಸಂಪನ್ನವಾದ ದೊಡ್ಡ ಹಳ್ಳಿಗಳು. ಮಾಳಿಗೆಯ ಮನೆಗಳೇ ಹೆಚ್ಚು ಊರಿಗೊಂದು ಗರಡೀಮನೆ ಹಾಗೂ ಮಾರುತಿಯ ದೇವಾಲಯ ಹತ್ತಿಕಾಳಿನ ಸಮೃದ್ಧಿ ಇರುವದರಿಂದ ಹೈನವೂ ಹೆಚ್ಚು ಇಲ್ಲಿಯ ಬೆಣ್ಣೆ ತುಪ್ಪಗಳು ಮುಂಬ-ಯಿಯ ಪೇಟೆಯಲ್ಲಿ ಮಾರುವವು ಒಕ್ಕಲುತನವೇ ಜನರ ಮುಖ್ಯ ಉದ್ಯೋಗ ಭೂಮಿಯಿಲ್ಲದವರು ಹತ್ತಿಯ ಗಿರಣಿಯಲ್ಲಿ ದುಡಿಯುವರು ಗಟ್ಟಿಗರಾದ ಇಲ್ಲಿಯ ಜನರು ಮುಂಬಯಿ ಬಂದರಗಳಲ್ಲಿ ಭಾರಹೊರುವ ಕೆಲಸವನ್ನು ಮಾಡುವರು



ಆಕೃತಿ ೨೮
ಖಾನದೇಶದ ಒಕ್ಕಲಿಗ.

ಖಾನದೇಶದ ಉತ್ತರ ಅಂಚಿನಲ್ಲಿ ಸಾತಪುಡಾ ಪರ್ವತವಿದೆ. ಇಲ್ಲಿ ಭಿಲ್ಲಜನರು ವಾಸಿಸುವರು ಇವರು ಇನ್ನೂ ತೀರ ಹಿಂದುಳಿದವರು. ಬಿಲ್ಲು ಬಾಣಗಳನ್ನು ಉಪಯೋಗಿಸಿ ಬೇಟೆಯಾಡುವರು ಇವರ ಜೀವನವನ್ನು ಸುಧಾರಿಸಲು ಸೇವಾಸಮಿತಿಗಳೂ, ಸರಕಾರವೂ ಕೂಡಿಯೇ ಯತ್ನಮಾಡುತ್ತಿರುವವು.

ಸೊಲ್ಲಾಪೂರ ಜಿಲ್ಹೆಯು ಹವೆ, ಮಳೆ, ಬೆಳೆಗಳಲ್ಲಿ ಹೆಚ್ಚಾಗಿ ಖಾನದೇಶವನ್ನು ಹೋಲುವದು ಭೀಮಾನದಿಯ ಫಲವತ್ತಾದ ಕೊಳ್ಳದಲ್ಲಿ ಹತ್ತಿ ಜೋಳಗಳು ಸಮೃದ್ಧವಾಗಿ ಬೆಳೆಯುವವು ಜೋಳವೇ ಮುಖ್ಯ ಆಹಾರ.

ಮಹಾರಾಷ್ಟ್ರದ ಇನ್ನೊಂದು ಭಾಗವಾದ ಕೊಲ್ಹಾಪೂರ, ಉತ್ತರ ಹಾಗೂ ದಕ್ಷಿಣ ಸಾತಾರಾ ( ಸಾಂಗಲಿ ) ಜಿಲ್ಹೆಗಳಲ್ಲಿಯ ಜನಜೀವನವೂ ಸೊಲ್ಲಾಪೂರದಂತೆಯೇ ಇರುವದು. ಈ ಭಾಗವು ಕೃಷ್ಣಾ ಹಾಗೂ ಪಂಚ-ಗಂಗಾ ನದಿಗಳ ಕೊಳ್ಳದ ಪ್ರದೇಶವು ಒಳ್ಳೇ ಬೆಳೆಯುಳ್ಳದ್ದಾಗಿದೆ. ಹಾಲು ಹೈನಗಳು ಹೆಚ್ಚು ಜನರು ಕಸುವುಳ್ಳವರು. ಗರಡೀ ಸಾಧನೆಯ ಹೌಸು ಬಹಳ. ಒಕ್ಕಲಿಗರು ಮೈಮುರಿದು ದುಡಿಯುವರು. ತಾಮ್ರ, ಹಿತ್ತಾಳಿ,

ಬೆಳ್ಳಿ, ಬಂಗಾರಗಳ ಕೈಗಾರಿಕೆಯು ಇಲ್ಲಿ ಚನ್ನಾಗಿ ನಡೆಯುವದು ಜನರ ಜೀವನವು ಒಳ್ಳೇ ಅಚ್ಚುಕಟ್ಟಿನದಾಗಿರುವದು ಅನೇಕ ಮರಾಠಾ ಯುವಕರು ಭಾರತದ ಸೈನ್ಯಪಡೆಯಲ್ಲಿ ಸೇರಿ ಹೆಸರು ಪಡೆಯುವರು

ಹಣ್ಣಿನ ತೋಟವೆಂದು ಹೆಸರು ಪಡೆದ ಇನ್ನೊಂದು ಮಹಾರಾಷ್ಟ್ರದ ಭಾಗವಿದೆ ಸಾತಾರೆ, ನಗರ ಹಾಗೂ ಸೊಲ್ಲಾಪೂರ ಜಿಲ್ಹೆಗಳು ಈ ಭಾಗ ದಲ್ಲಿ ಬರುವವು. ನೀರಾ, ಪ್ರವರಾ ಹಾಗೂ ಗೋದಾವರಿಗಳ ಆಣೆಕಟ್ಟು ಗಳಿಂದ ಇಲ್ಲಿ ನೀರಾವರಿಯ ಅನುಕೂಲತೆಯಾಗಿದೆ. ಕಬ್ಬು ಹೆಚ್ಚಾಗಿ ಬೆಳೆಯು ವದರಿಂದ ಸಕ್ಕರೆಯ ಕಾರಖಾನೆಗಳಾಗಿವೆ ಹಣ್ಣು ಹಂಪಲಗಳನ್ನೂ, ಕಾಯಿಪಲ್ಲೆಗಳನ್ನೂ ವಿಪುಲವಾಗಿ ಬೆಳೆಯುವರು. ಇವುಗಳನ್ನು ಸಮೀಪದ ನಗರಗಳಿಗೆ ಮುಟ್ಟಿಸಲು ಇಂದು ಮೋಟಾರ ಸಾರಿಗೆಯು ಸಹಾಯ ಮಾಡು ತ್ತಿದೆ. ರಾಜವಾಡೆಯ ಅಂಜೀರು, ನಾನವಡದ ಕಿತ್ತಳೆ, ನಾಸಿಕದ ದ್ರಾಕ್ಷೆ, ವಸಯಿಯ ಬಾಳೇಹಣ್ಣು ಇವೆಲ್ಲವುಗಳು ಶ್ರೇಷ್ಠವಾದವುಗಳು.

ಮಹಾರಾಷ್ಟ್ರದ ಜನರು ಪಂಢರಪುರದ ವಿಠ್ಠಲ ಭಕ್ತರು. ಪ್ರತಿವರುಷ ಆಷಾಢ ಕಾರ್ತೀಕ ಏಕಾದಶಿಗಳಲ್ಲಿ ಅಸಂಖ್ಯ ವಾರಕರಿಗಳು ಅಲ್ಲಿ ನೆರೆಯು ವರು. ಮಹಾಸಂತರಾದ ಜ್ಞಾನದೇವ, ತುಕಾರಾಮ ಇವರು ನೆಲೆಸಿದ ಆಳಂದಿ, ಪೈಠಣ ಮೊದಲಾದ ಕ್ಷೇತ್ರಗಳು ಇಲ್ಲಿ ಇರುವವು ಕೊಲ್ಹಾಪುರದ ಅಂಬಾಬಾಯಿ, ಜ್ಯೋತಿಬಾ, ಜೇಜೂರಿಯ ಖಂಡೋಬಾ ಮರಾಠರಿಗೆ ಕುಲ ದೈವತಗಳಾಗಿವೆ.

## ಗುಜರಾಥದ ಜನರು

ನಿಮ್ಮೂರಿನಲ್ಲಿ ನೆಲೆಸಿರುವ 'ಗುಜರಾಥೀ' ಜನರನ್ನು ನೀವು ನಿತ್ಯವೂ ನೋಡುವಿರಿ. ಇವರು ಗುಜರಾಥದವರು. ನಾಡಿನ ಹೆಸರೇ ಜನಾಂಗಕ್ಕೂ ಬಂದಿದೆ ಇವರಾಡುವ ಭಾಷೆಯೂ ಗುಜರಾಥೀ. ಈ ಜನರ ಮೈಬಣ್ಣ ನಸುಗೆಂಪು ನಿಲುವಿಕೆ ಸಾಮಾನ್ಯವಾದುದು ಗಟ್ಟಿಮುಟ್ಟಾದ ಮೈಕಟ್ಟು. ನಿತ್ಯದ ಊಟದಲ್ಲಿ ಗೋದಿ, ಸಜ್ಜೆ ರೊಟ್ಟಿಗಳನ್ನು ತೆಗೆದುಕೊಳ್ಳುವರು. ಪುರಿ–ಪಲ್ಯೆ ಇವರ ಪ್ರೀತಿಯ ಊಟ ಹಾಲಿನಿಂದ ವಿವಿಧ ಪಕ್ವಾನಗಳನ್ನು ಮಾಡುವರು. ಇವರು ಧೋತರ ಉಡುವ ರೀತಿ ನಮ್ಮಿಂದ ಬೇರೆಯಾಗಿದೆ. ಇವರು ಎಡಕ್ಕೆ ನಿರಿಗೆಯನ್ನು ಹಾಕುವರು ಒಕ್ಕಲಿಗರು ಕಿರಿಯಗಲಾದ ಧೋತರವನ್ನು ಅಂಡುಗಚ್ಚೆ ಹಾಕಿ ಉಟ್ಟುಕೊಳ್ಳುವರು ಮೈಮೇಲೆ ಗಿಡ್ಡವಾದ


ಆಕೃತಿ ೨೯. ಗುಜರಾಥದ ವ್ಯಾಪಾರಸ್ಥರು

ಬಗಲುಬಂಡೆ ತಲೆಗೆ ತಿರುವುಮುರುವಾಗಿ ಸುತ್ತಿದ ಮುಂಡಾಸು. ಕಾಲಲ್ಲಿ ಚಡಾವುಗಳನ್ನು ಮೆಟ್ಟು ವರು. ಇವರ ದೇಶದಲ್ಲಿ ಕಲ್ಲಿನ ಕೊರತೆಯಿರುವ ದರಿಂದ ಮನೆ ಕಟ್ಟಿಕೊಳ್ಳಲು ಪೋರ ಬಂದರದಿಂದ ಕಲ್ಲನ್ನು ತರಿಸಿಕೊಳ್ಳುವರು ಮಾಳಿಗೆಯ ಮನೆಗಳೇ ಇಲ್ಲಿ ಹೆಚ್ಚು. ಗುಜರಾಥೀ ಜನರಲ್ಲಿ ಕೆಲವರು ವೈಷ್ಣ ವರು, ಕೃಷ್ಣಭಕ್ತರು ಕೆಲವರು ಜೈನ ಮತದವರು. 'ಅಹಿಂಸೆ' ಯು ಇವೆರಡೂ ಧರ್ಮಗಳಲ್ಲಿ ಮುಖ್ಯ ವಾದ ತತ್ವವಾಗಿದೆ. ಇದರಿಂದ ಗುಜರಾಥಿಗಳು ಮೀನ ಮಾಂಸಗಳನ್ನು ಮುಟ್ಟುವದಿಲ್ಲ. ಗಾಂಧೀಜಿ ಯವರು ಇದೇ ಅಹಿಂಸೆಯ ಪರಂಪರೆಯಲ್ಲಿ ಬೆಳೆದು ಬಂದವರು

ಒಕ್ಕಲುತನವೇ ಇಲ್ಲಿಯ ಮುಖ್ಯ ಉದ್ಯೋಗ ವಾದರೂ ವ್ಯಾಪಾರದಲ್ಲಿ ಈ ಜನರು ತಜ್ಞರು ಹಾಗೂ ಹೆಚ್ಚಾಗಿ ತೊಡಗಿರು ವರು. ಗುಜರಾಥದ ಪ್ರತಿಯೊಂದು ಮನೆತನದಲ್ಲಿ ಒಬ್ಬನಾದರೂ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿರುವನು. ಗುಜರಾಥಿಗಳು ದಾನಧರ್ಮಗಳಲ್ಲಿ ಉದಾರರು ಅನೇಕ ಸಂಸ್ಥೆಗಳಿಗೆ ಸಹಾಯಮಾಡುವರು ಗೋಕುಲಾಷ್ಟ ಮಿಯು—ಶ್ರೀಕೃಷ್ಣಜಯಂತಿಯು–ಇವರಿಗೆ ದೊಡ್ಡ ಹಬ್ಬ. ದೀಪಾವಳಿಯೇ ಇವರಿಗೆ ಹೊಸ ವರುಷದ ಪ್ರಾರಂಭ. ಜೈನಮತೀಯರಿಗೆ ಶ್ರೀ ಮಹಾವೀರ ಜಯಂತಿಯು ದೊಡ್ಡ ಹಬ್ಬವೆನಿಸುವದು ಜೈನ ಮತೀಯರು ಸೂರ್ಯ ಮುಳುಗುವದರೊಳಗಾಗಿ ತಮ್ಮ ಊಟ ಮುಗಿಸುವರು.

ಒಂದು ಸಂಗತಿಯನ್ನು ನೀವು ಕಂಡಿರಬಹುದು ಕರ್ನಾಟಕ ಮಹಾ ರಾಷ್ಟ್ರಗಳ ಜೀವನದಂತೆ ಗುಜರಾಥದ ಜನಜೀವನದಲ್ಲಿ ವಿವಿಧತೆಯಿಲ್ಲ. ಅದು ಸಾಮಾನ್ಯವಾಗಿ ಒಂದೇ ವಿಧವಾಗಿದೆ.

ಮುಂಬಯಿ ರಾಜ್ಯದ ಪರಿಚಯವನ್ನು ನೀವು ಮಾಡಿಕೊಂಡಿರುವಿರಿ. ಈ ರಾಜ್ಯದ ವಿವಿಧ ಭಾಗಗಳಲ್ಲಿ ಜನಜೀವನವು ಸುತ್ತಲಿನ ನಿಸರ್ಗದ ಪರಿ ಸ್ಥಿತಿಗೆ ಹೊಂದಿಕೊಂಡು ಹೇಗೆ ಭಿನ್ನವಾಗಿ ಸಾಗಿರುವದೆಂಬುದನ್ನು ನೀವು ತಿಳಿದುಕೊಳ್ಳಬೇಕು. ಭೂಗೋಲದ ವಿಷಯವನ್ನು ಕಲಿಯುವ ಉದ್ದೇಶವೂ ಇದೇ ಆಗಿರುವದು.

ನೀವು ನೆಲೆಸಿರುವ ಮುಂಬಯಿ ರಾಜ್ಯ ನಿಮ್ಮ ಮನೆ ಅದು ಭಾರತೀಯರಾದ ನಮಗೆಲ್ಲರಿಗೂ ದೊಡ್ಡಮನೆಯಾಗಿರುವ ಭಾರತದ ಒಂದು ಚಿಕ್ಕ ಭಾಗ. ಆ ಭವ್ಯವಾದ ಮನೆಯಲ್ಲಿ ಮುಂಬಯಿ ರಾಜ್ಯವೂ ಒಂದು ವಿಶಾಲವಾದ ಕೋಣೆ ಮಾತ್ರ. ಈ ಸಂಗತಿಯನ್ನು ನೀವು ಎಂದಿಗೂ ಮರೆಯಕೂಡದು.

## ಅಭ್ಯಸನಗಳು

೧ ಹವೆ, ಮಳೆ, ಬೆಳೆಗಳಲ್ಲಿ ಇರುವ ವಿವಿಧತೆಯು ಮುಂಬಯಿ ರಾಜ್ಯದ ಬೇರೆ ಬೇರೆ ಭಾಗಗಳ ಜನಜೀವನದಲ್ಲಿ ಹೇಗೆ ಒಡೆದುತೋರುವದು ? ಕೆಲವು ಉದಾಹರಣೆಗಳನ್ನು ಕೊಡಿರಿ

೨. ಕೆಳಗಿನ ಸಂಗತಿಗಳಿಗೆ ಕಾರಣಗಳನ್ನು ಇಲ್ಲವೆ ಉತ್ತರ ಬರೆಯಿರಿ.

ಅ) ಗುಜರಾಥಿಗಳು ಮೀನ ಮಾಂಸಗಳನ್ನು ತಿನ್ನುವದಿಲ್ಲ

ಬ) ಕರಾವಳಿ ಪ್ರದೇಶದ ಜನರು ಅಕ್ಕಿ, ಮೀನುಗಳನ್ನೇ ಹೆಚ್ಚಾಗಿ ತಮ್ಮ ಆಹಾರದಲ್ಲಿ ಉಪಯೋಗಿಸುವರು

ಕ) ಕೊಂಕಣದಲ್ಲಿ ಮನೆಗಳಿಗೆ ಇಳುಕಲಾದ ಚಪ್ಪರಗಳಿರುವವು

ಡ) ಮೀನಗಾರರ ಚಿಕ್ಕ ಹಳ್ಳಿ ಇಂದಿನ ಮುಂಬಯಿ ಹೇಗಾಯಿತು ?

ಇ) ಗುಜರಾಥದಲ್ಲಿ ಮನೆಗಳನ್ನು ಕಟ್ಟಲು ಕಲ್ಲುಗಳನ್ನು ಎಲ್ಲಿಂದ ತರುವರು ?

ಫ) ಕರಾವಳಿಯ ಜನರಿಗೆ ತೆಂಗು ಕಲ್ಪತರುವಂತೆ ! ಏಕೆ ?

ಗ) ಗುಜರಾಥೀ ಜನರು ವ್ಯಾಪಾರದಲ್ಲಿ ಮುಂದೆ ಬಂದಿರುವರು

ಹ) ಕನ್ನಡಿಗರಲ್ಲಿ ಉತ್ಸಾಹವೂ ಹೆಚ್ಚು ಉದಾರ ಬುದ್ಧಿಯೂ ಹೆಚ್ಚು.

ಯ) ಮಲೆನಾಡಿನ ಜನರ ಜೀವನವು ಕಷ್ಟಕರವಾದುದು

ಜ) ಮಹಾರಾಷ್ಟ್ರದಲ್ಲಿ ಪುಣ್ಯಕ್ಷೇತ್ರಗಳು ಯಾವವು ?

ಪ್ರಕರಣ ೧೧

# ಮುಂಬಯಿ ರಾಜ್ಯದ ನಕಾಶವನ್ನು ಓದುವದು

ನೀವು ಮನೆಗೆ ಬಂದ ಪತ್ರಗಳನ್ನು ಓದಬಲ್ಲಿರಿ. ಶಾಲೆಯ ಪುಸ್ತಕಗಳನ್ನು ಓದಬಲ್ಲಿರಿ. ನಕಾಶವು ಪತ್ರವೂ ಅಲ್ಲ, ಪುಸ್ತಕವೂ ಅಲ್ಲ, ಅದನ್ನು ಹೇಗೆ 'ಓದ' ಬೇಕು ? ಎಂದು ನೀವು ಕೇಳಬಹುದಲ್ಲವೇ ?

ನಕಾಶವನ್ನು ಓದುವದೂ ಒಂದು ರೀತಿಯಾಗಿದೆ ನಕಾಶದ ಉದ್ದೇಶವೇನು ? ಎಂಬುದನ್ನು ನೀವು ತಿಳಿದುಕೊಳ್ಳಬೇಕು. ನಿಮ್ಮ ಮನೆಯನ್ನು ನೋಡದವರಿಗೆ ಅದರ ಬಗ್ಗೆ ತಿಳಿಸಿಕೊಡಬೇಕಾಗಿದೆ ಮನೆಯನ್ನು ಎತ್ತಿ ಒಯ್ಯುವಂತಿಲ್ಲ ಅಳತೆಗೆ ಸರಿಯಾಗಿ ಅದರದೊಂದು ಚಿಕ್ಕ ಆಕೃತಿಯನ್ನು ಮಾಡಬಹುದು, ಫೋಟೋ ಛಾಯಚಿತ್ರ ತೆಗಿಸಬಹುದು, ಇಲ್ಲವೆ ಗೆರೆಗಳಿಂದ ಹಾಗೂ ಚಿಹ್ನಗಳಿಂದ ಅದರದೊಂದು ನಕ್ಷೆಯನ್ನು ತೆಗೆಯಬಹುದು ನಕಾಶವು ಒಂದು ಪ್ರದೇಶದ ಇಂಥದೊಂದು ನಕ್ಷೆ

ನಕಾಶದ ಎದುರಿನಲ್ಲಿ ನಿಂತರೆ, ನಿಮಗೆ ಆ ಪ್ರದೇಶದ ಪ್ರಾಕೃತಿಕ ಸ್ವರೂಪವು ಕಣ್ಮುಂದೆ ಇರಿಸಿದಂತಾಗುವದು ಭೂಮಿಯ ಏರಿಳಿತಗಳು, ಬೆಟ್ಟಗಳು, ನದಿಗಳು, ಸರೋವರಗಳು, ವಿವಿಧವಾದ ಮಾರ್ಗಗಳು, ನಗರಗಳು ಎಲ್ಲವೂ ಬೇರೆ ಬೇರೆ ಚಿಹ್ನಗಳಿಂದ ನಕಾಶದಲ್ಲಿ ತೋರಿಸಲ್ಪಡುವವು.

ಇದಕ್ಕಾಗಿ ನಕಾಶದಲ್ಲಿ ಬೇರೆ ಬೇರೆ ಚಿಹ್ನಗಳನ್ನು ಉಪಯೋಗಿಸುವರು. ಬೇರೆ ಬೇರೆ ಬಣ್ಣಗಳನ್ನೂ ಉಪಯೋಗಿಸುವದುಂಟು. ಈ ಚಿಹ್ನಗಳ ಸಹಾಯದಿಂದ ಅವುಗಳು ಸೂಚಿಸುವ ಸಂಗತಿಗಳನ್ನು ತಿಳಿದುಕೊಳ್ಳುವದೇ ನಕಾಶವನ್ನು ಓದುವದು. ಗ್ಲೋಬು ನಕಾಶಗಳೆರಡರಲ್ಲಿಯೂ ಇವೇ ಚಿಹ್ನಗಳನ್ನು ಉಪಯೋಗಿಸುವರು ನಕಾಶವನ್ನು ಗೋಡೆಯ ಮೇಲೆ ತೂಗ ಹಾಕುವಂತೆ ಮಾಡಿರುವರು ಸಪಾಟು ನೆಲದ ಮೇಲಿನ ದೃಶ್ಯಗಳಿಗೂ ನಕಾಶದಲ್ಲಿ ನೀವು ನೋಡುವದಕ್ಕೂ ಇದೇ ಕಾರಣದಿಂದ ಹೆಚ್ಚುಕಡಿಮೆಯೆನಿಸಿ, ಒಮ್ಮೊಮ್ಮೆ ತಪ್ಪು ಕಲ್ಪನೆಯುಂಟಾಗುವದು. ಸಕಾಶದಲ್ಲಿ ನಿಮಗೆ ಮೇಲೆಯೆಂದು ತೋರುವದು ಉತ್ತರದಿಕ್ಕಿಗೆ, ಕಳಗೆ ಎಂದು ತೋರುವದು ದಕ್ಷಿಣದಿಕ್ಕಿಗೆ ಎಂಬುದನ್ನು ನೀವು ಅರಿತಿರಬೇಕು

ಇಲ್ಲಿ ಕೊಟ್ಟಿರುವ ನಕಾಶದಲ್ಲಿ ಕೆಲವು ಚಿಹ್ನಗಳನ್ನು ಕೊಟ್ಟಿದೆ ಇವು ಸಾಮಾನ್ಯ ಚಿಹ್ನಗಳು ಇವುಗಳಲ್ಲದೆ ಹೆಚ್ಚಿನ ವಿವರಗಳನ್ನು ತೋರಿಸಲು ವಿಶೇಷ ಚಿಹ್ನಗಳನ್ನೂ ಉಪಯೋಗಿಸುವದುಂಟು ಜಾತ್ರೆಯಾಗುವ ಊರುಗಳಿಗೆ ಗುಡಿಯ ಚಿಹ್ನವನ್ನೂ ಕಾರಖಾನೆಗಳಿರುವಲ್ಲಿ ಕಾರಖಾನೆಯ ಮನೆಯ ಚಿಹ್ನವನ್ನೂ ಹಾಕುವದುಂಟು

ಈ ಚಿಹ್ನಗಳು ನಕಾಶವನ್ನು 'ಓದಲು' ನಮಗೆ ಸಹಾಯಕವಾಗುವವು. ನಕಾಶದ ಕೆಳಗೆ ಕೊಟ್ಟಿರುವ ಪ್ರಮಾಣದ ಮೇಲಿಂದ ಮೈಲುಗಳಲ್ಲಿ

ಅಂತರವನ್ನು ತಿಳಿದುಕೊಳ್ಳಲೂ ಬರುವದು ಇವೆಲ್ಲ ಚಿಹ್ನಗಳ ಸಹಾಯ



ಆಕೃತಿ ೩೦ ಮುಂಬಯಿ ರಾಜ್ಯದ ನಕಾಶವನ್ನು ಓದುವದು.

ದಿಂದ ನೀವು ನಕಾಶವನ್ನು ಓದಿದರೆ, ಆ ಪ್ರದೇಶದ ಸರಿಯಾದ ಪರಿಚಯವು ನಿಮಗಾಗುವದು.

ಪ್ರಕರಣ ೧೨

## ಪ್ರಾಯೋಗಿಕ

ಮೋಡಗಳಿಲ್ಲದ ಒಂದು ತಿಳಿಯಾದ ರಾತ್ರಿಯಲ್ಲಿ ಆಕಾಶವನ್ನು ನಿರೀಕ್ಷಿಸಿರಿ ಎಂಥ ಸೋಜಿಗವಾದ, ಸುಂದರವಾದ ದೃಶ್ಯವು ನಿಮ್ಮ ಕಣ್ಣಿಗೆ ಬೀಳುವದು! ಲೆಕ್ಕವಿಲ್ಲದಷ್ಟು ನಕ್ಷತ್ರಗಳನ್ನು ಅಲ್ಲಿ ಕಾಣುವಿರಿ ಇವುಗಳಲ್ಲದೆ ತೇಜಸ್ವಿಯಾದ ಕೆಲವು ಗ್ರಹಗಳನ್ನೂ ನೀವು ನೋಡುವಿರಿ ಚಮಕಿಸುವ

ಚಿಕ್ಕಿಗಳೇ ನಕ್ಷತ್ರಗಳು. ಗ್ರಹಗಳ ಪ್ರಕಾಶವು ಸ್ಥಿರವಾಗಿರುವದು. ಅವುಗಳ ಹೊಳಪಿನಲ್ಲಿ, ಬಣ್ಣದಲ್ಲಿ ಕೂಡ ನೀವು ಹೆಚ್ಚು ಕಡಿಮೆಯನ್ನು ಕಾಣಬಹುದು ಗ್ರಹಗಳು 'ಪರಪ್ರಕಾಶ'ಗಳು. ಸೂರ್ಯನಿಂದ ಅವು ಪ್ರಕಾಶವನ್ನು ಪಡೆಯುವವು—ನಾವಿರುವ ಪೃಥ್ವಿಯು ಪಡೆಯುವ ಹಾಗೆ ಪೃಥ್ವಿಯೂ ಒಂದು ಗ್ರಹವು ಗ್ರಹಗಳ ಸಂಖ್ಯೆಯೂ ಕಡಿಮೆ. ನಮ್ಮ ಪೂರ್ವಜರು ಸಪ್ತ ಗ್ರಹಗಳೆಂದು ಹೇಳಿದರು ಇಂದು ಗ್ರಹಗಳ ಸಂಖ್ಯೆ ೧೪ರ ವರೆಗೆ ಏರಿದೆ

ನಮಗೆ ನಕ್ಷತ್ರಗಳು ತೀರ ಚಿಕ್ಕವುಗಳಾಗಿ ತೋರುವವು. ನಿಜವಾಗಿ ಇವು ಬಹಳೇ ದೊಡ್ಡವು. ಕೆಲವೊಂದು ನಕ್ಷತ್ರಗಳ ಎದುರು ನಮ್ಮ ಪೃಥ್ವಿಯು, ಆನೆಯ ಎದುರು ಇರುವೆಯ ಹಾಗೆ ನಕ್ಷತ್ರಗಳಿಂದ ಬರುವ ಪ್ರಕಾಶವು ಪೃಥ್ವಿಯನ್ನು ಮುಟ್ಟಬೇಕಾದರೆ ಅಸಂಖ್ಯ ವರುಷಗಳು ಹಿಡಿಯುವವು. ಈ ಪ್ರಕಾಶದ ಸಹಾಯದಿಂದಲೇ ಪೃಥ್ವಿಯಿಂದ ನಕ್ಷತ್ರಗಳ ಅಂತರವನ್ನು ಕಂಡುಹಿಡಿಯುವರು

ನಕ್ಷತ್ರಗಳು ಗುಂಪುಕಟ್ಟಿಕೊಂಡಿರುವವು ನಕ್ಷತ್ರಗಳ ಈ ಗುಂಪುಗಳಿಗೆ 'ನಕ್ಷತ್ರಪುಂಜ'ಗಳೆಂದು ಹೇಳುವರು ಇವುಗಳಲ್ಲಿ 'ಸಪ್ತರ್ಷಿ ಪುಂಜ'ವೂ ಒಂದಾಗಿದೆ ಪ್ರಶ್ನಾರ್ಥ ಚಿಹ್ನದಂತಿರುವ ಇದರ ಆಕಾರವು ಎದ್ದು ಕಾಣುತ್ತಿದೆ ಆದ್ದರಿಂದಲೇ ಸಪ್ತರ್ಷಿಪುಂಜವನ್ನು ನೀವು ಸುಲಭವಾಗಿ ಗುರುತಿಸಬಹುದು.

ಸಪ್ತರ್ಷಿ ಪುಂಜವು ಧ್ರುವ ನಕ್ಷತ್ರದ ಸುತ್ತಲೂ ತಿರುಗುವದು. ಧ್ರುವ ನಕ್ಷತ್ರದ ಸ್ಥಾನವು ಸ್ಥಿರವಾದುದು ಸಪ್ತರ್ಷಿಪುಂಜದ ಸಹಾಯದಿಂದ ಧ್ರುವ ನಕ್ಷತ್ರವನ್ನು ನಾವು ಸುಲಭವಾಗಿ ಗುರುತಿಸಬಹುದಾಗಿದೆ ಸಪ್ತರ್ಷಿ—ಅಂದರೆ ಏಳು ಋಷಿಗಳು—ಕ್ರತು, ಪುಲಹ, ಪುಲಸ್ತ್ಯ, ಅತ್ರಿ, ಅಂಗಿರಾ, ವಸಿಷ್ಠ ಹಾಗೂ ಮರೀಚಿ. ಸಪ್ತರ್ಷಿಪುಂಜಕ್ಕೆ 'ಋಕ್ಷ'ವೆಂದೂ ಮತ್ತೊಂದು ಹೆಸರು. ಋಕ್ಷವೆಂದರೆ ಕರಡಿಯು ಇಂಗ್ಲಿಷಿನಲ್ಲಿಯೂ ಇದಕ್ಕ 'ದೊಡ್ಡ ಕರಡಿ' ಎಂದು ಹೇಳುವದುಂಟು.

- ಈ ಸಪ್ತರ್ಷಿಪುಂಜವನ್ನು ನಿರೀಕ್ಷಿಸಿರಿ. ಪ್ರಶ್ನೆಚಿನ್ಹೆಯ ತುದಿಯಲ್ಲಿರುವದು 'ಕ್ರತು' ನಕ್ಷತ್ರವು. ಕ್ರತು ನಕ್ಷತ್ರದಿಂದ ಉತ್ತರಕ್ಕೆ ಸರಳರೇಷೆಯಲ್ಲಿ ನೋಡಿರಿ. ಅಲ್ಲಿ ಕಾಣುವದು ಧ್ರುವನಕ್ಷತ್ರ. ಧ್ರುವನಕ್ಷತ್ರವು ಸ್ಥಿರವಾದುದು, ಆಕಾಶವು ನಿರಭ್ರವಾಗಿದ್ದರೆ, ಅದನ್ನು ನೀವು ನಿತ್ಯದಲ್ಲಿಯೂ ನೋಡಬಲ್ಲಿರಿ

ಸಪ್ತರ್ಷಿ ಪುಂಜದಲ್ಲಿ ತುದಿಯಿಂದ ಆರನೆಯ ನಕ್ಷತ್ರವೆ 'ವಸಿಷ್ಠ' ಋಷಿಯು. ಈ ವಸಿಷ್ಠರ ಬಳಿಯಲ್ಲಿ ಒಂದು ಚಿಕ್ಕ ತಾರೆಯನ್ನು ನೀವು ಕಾಣುವಿರಿ ಅದೇ ವಸಿಷ್ಠರ ಸತಿಯಾದ ಅರುಂಧತಿಯು. ಅಂತೆಯೇ ಪತಿಯನ್ನು ನೆರಳಿನಂತೆ ಹಿಂಬಾಲಿಸುವ ಸತಿಯನ್ನು ಅರುಂಧತಿಗೆ ಹೋಲಿಸುವರು.




ಆಕೃತಿ ೩೧. ಸಪ್ತಋಷಿಮಂಡಳ ಹಾಗೂ ಧ್ರುವನಕ್ಷತ್ರ

ಮೇ, ಜೂನ ತಿಂಗಗಳಲ್ಲಿ ಸುಮಾರು ರಾತ್ರಿ ಎಂಟು ಗಂಟೆಗೆ ಆಕಾಶದ ಕಡೆಗೆ ನೋಡಿರಿ ಸಪ್ತರ್ಷಿ ಪುಂಜವು ನಿಮಗೆ ಎಲ್ಲಿ ಕಾಣುವದು? ಅದು ಧ್ರುವದ ನೆತ್ತಿಯ ಮೇಲೆ ಬಂದಿರುವದು ಬೇರೆ ಬೇರೆ ತಿಂಗಳಲ್ಲಿ ಅದರ ಸ್ಥಾನವನ್ನು ಗುರುತಿಸಿರಿ.

ಧ್ರುವ ನಕ್ಷತ್ರದ ಬಗ್ಗೆ ಇನ್ನೊಂದು ಸಂಗತಿಯನ್ನು ನೀವು ತಿಳಿದುಕೊಳ್ಳಬಹುದು. ಧ್ರುವ ನಕ್ಷತ್ರವು ಸ್ಥಿರವೆಂದು ನಿಮಗೆ ಹಿಂದೆ ಹೇಳಿದೆ. ಧ್ರುವ ನಕ್ಷತ್ರದ ಸ್ಥಾನದಿಂದ ಉತ್ತರ ದಿಕ್ಕನ್ನು ನಿಶ್ಚಿತವಾಗಿ ನಮಗೆ ಗುರುತಿಸಲು ಬರುವದು. ಉತ್ತರ ದಿಕ್ಕು ಗೊತ್ತಾದರೆ ಅದರ ಎದುರಿಗಿರುವದು ದಕ್ಷಿಣವೆಂದು ಬೇರೆ ಹೇಳಬೇಕಾಗಿಲ್ಲ ಪ್ರಾಚೀನ ಕಾಲದಲ್ಲಿ ದಿಕ್ಕು ತೋರಿಸುವ ಹೋಕಾ ಯಂತ್ರದ ಶೋಧವು ಇನ್ನೂ ಆಗಿರಲಿಲ್ಲ. ನಾವಿಕರು ರಾತ್ರಿಯಲ್ಲಿ ದಿಕ್ಕುಗಳನ್ನು ಕಂಡು ಹಿಡಿಯಲು ಧ್ರುವ ನಕ್ಷತ್ರವನ್ನೇ ಹೆಚ್ಚಾಗಿ ಅವಲಂಬಿಸುತ್ತಿದ್ದರು. ಆಗಿನ ಕಾಲದ ನಾವಿಕರಿಗೆ ಧ್ರುವತಾರೆಯೆ ನಂಬಿಗಸ್ತನಾದ ಮಾರ್ಗದರ್ಶಕ.

ತಿಳಿದುಕೊಂಡಿರಬಹುದು ನೀರಿನ ಪ್ರವಾಹವು ಎತ್ತರ ಭೂಮಿಯಿಂದ ಇಕಲಿನ ಭೂಮಿಯ ಕಡೆಗೆ ಹರಿಯುವದು ನದಿಗಳ ಪ್ರವಾಹದ ಮೇಲಿಂದ ಈ ರಾಜ್ಯದ ಭೂಮಿಯ ಏರಿಳಿತಗಳನ್ನು ನಾವು ಕಂಡುಕೊಳ್ಳುವಂತಿದೆ. ಭೂಮಿಯ ಏರಿಳಿತಗಳಿಗೆ ಆ ಭೂಮಿಯ ಸ್ವಾಭಾವಿಕ ರಚನೆಯೆನ್ನುವರು.

## ಅಭ್ಯಾಸನಗಳು

೧ ಮುಂಬಯಿ ರಾಜ್ಯದಲ್ಲಿ ತೀರ ಪ್ರಾಚೀನ ಪರ್ವತವು ಯಾವದು ?
೨. ಮುಂಬಯಿ ರಾಜ್ಯದಲ್ಲಿ ಸಹ್ಯಾದ್ರಿಯ ತೀರ ಉನ್ನತವಾದ ಶಿಖರವು ಯಾವದು?
೩ ಪರ್ವತಗಳನ್ನು ದಾಟಿ ಹೋಗುವ ದಾರಿಗಳು ಎಷ್ಟು ವಿಧವಾಗಿವೆ? ಉದಾಹರಣೆ ಕೊಡಿರಿ
೪ ಬೆಟ್ಟಗಳಿಂದ ನಮಗೇನು ಪ್ರಯೋಜನ ಉಂಟು ?
೫ ಮುಂಬಯಿ ರಾಜ್ಯದ ಮುಖ್ಯವಾದ 'ಜಲಚ್ಛೇದ' ಗಳು ಯಾವವು ?
೬ ನದಿಯ ಪ್ರವಾಹವು ನಮ್ಮ ಜೀವನವನ್ನು ಹೇಗೆ ಹೋಲುವದು ?
೭ ಈ ರಾಜ್ಯದಲ್ಲಿ ಪಶ್ಚಿಮಕ್ಕೆ ಹರಿಯುವ ನದಿಗಳು ಯಾವವು ?
೮ ತಪ್ಪಲಿನ ಪ್ರದೇಶದಲ್ಲಿ ಹರಿಯುವ ನದಿಗಳು ಯಾವವು ? ಅವುಗಳ ಸರಿಯಾದ ಉಪಯೋಗವನ್ನು ಹೇಗೆ ಮಾಡಿಕೊಳ್ಳುತ್ತಿರುವರು ?
೯ ಕೊಂಕಣದ ನದಿಗಳು ಹಾಗೂ ತಪ್ಪಲಿನ ನದಿಗಳು—ಇವುಗಳಲ್ಲಿ ಏನು ಅಂತರ ಕಂಡುಬರುವದು ?

ಪ್ರಕರಣ ೪

## ಸ್ವಾಭಾವಿಕ ರಚನೆ

ನಮ್ಮ ಮುಂಬಯಿ ರಾಜ್ಯದ ಭೂಮಿಯ ಸ್ವಾಭಾವಿಕ ರಚನೆಯನ್ನು ನಾವು ನಿರೀಕ್ಷಿಸೋಣ ಈ ರಾಜ್ಯದ ಹೆಚ್ಚು ಭಾಗವು ದಕ್ಷಿಣದ ತಪ್ಪಲಿನಲ್ಲಿ ಬರುವದು ಈ ತಪ್ಪಲು ಪೂರ್ವಕ್ಕ ಇಳುಕಲಾಗಿರುವದು ನದಿಗಳೆಲ್ಲ ಪೂರ್ವಾಭಿಮುಖವಾಗಿ ಹರಿದು ದಕ್ಷಿಣಕ್ಕೆ ಒಲಿದಿರುವದನ್ನು ನೀವು ಕಾಣಬಹುದು. ಸಮುದ್ರದ ಪಾತಳಿಯ ಮೇಲಿಂದ ಎತ್ತರವನ್ನು ಅಳೆಯುವರು ಇದಕ್ಕೆ 'ಸಮುದ್ರಸಪಾಟಿಯಿಂದ ಎತ್ತರ' ವೆಂದು ಹೇಳುವರು ನಮ್ಮ ರಾಜ್ಯದ ಭಾಗವಾಗಿದ್ದ ದಕ್ಷಿಣದ ತಪ್ಪಲು ಸರಾಸರಿ ಒಂದು ಸಾವಿರ ಫೂಟು

ಗಳಿಗಿಂತಲೂ ಎಲ್ಲಿಯೂ ಕಡಿಮೆ ಎತ್ತರವಾಗಿರುವದಿಲ್ಲ ಈ ತಪ್ಪಲು ಪ್ರದೇಶಕ್ಕೆ ಉತ್ತರದಲ್ಲಿ ಸಾತಪುಡಾ ಪರ್ವತವೂ. ನರ್ಮದಾ ನದಿಯೂ, ಪಶ್ಚಿಮಕ್ಕೆ—ಸಹ್ಯಾದ್ರಿಯೂ ಸ್ವಾಭಾವಿಕವಾದ ಮೇರೆಗಳಾಗಿವೆ.

ಈ ತಪ್ಪಲಿನ ಪಶ್ಚಿಮದ ಅಂಚಾದ ಸಹ್ಯಾದ್ರಿಯು ಹೇಗೆ ಅಖಂಡ ವಾಗಿ ಹಬ್ಬಿರುವದೆಂಬುದನ್ನು ನೋಡಿರಿ ಘಟ್ಟಗಳ ಸಹಾಯದಿಂದ ಈ ಬೆಟ್ಟಗಳನ್ನು ದಾಟಿ ನಾವು ಪಶ್ಚಿಮಕ್ಕೆ ಹೊರಡೋಣ ಇಲ್ಲಿ ಇನ್ನೊಂದು ಬಗೆಯ ಭೂರಚನೆಯನ್ನು ನಾವು ಕಾಣಬಹುದು ಬೆಟ್ಟಗಳ ಪಶ್ಚಿಮದ ಇಳುಕಲಿನಲ್ಲಿ ದಟ್ಟವಾದ ಕಾಡುಗಳು ಹಬ್ಬಿರುವವು ಅಡಿಯ ಭಾಗವು ಕಲ್ಲುಬಂಡೆಗಳಿಂದ ತುಂಬಿರುವದು ಮುಂದೆ ಅರಬೀ ಸಮುದ್ರದ ನೀರಿನ ಅಂಚಿನ ವರೆಗೆ ಒಂದು ಕಿರಿಯಗಲಾದ ಬಯಲು ಹಬ್ಬಿರುವದು ಪುರಾಣ ಗಳಲ್ಲಿ ಈ ಕಿರಿಯಗಲಾದ ಬಯಲಿಗೆ ಪರಶುರಾಮಕ್ಷೇತ್ರವೆಂದು ಹೇಳುವರು ಪರಶುರಾಮನು ಸಮುದ್ರವನ್ನು ಹಿಂದಕ್ಕೆ ನೂಕಿ ಈ ಬಯಲು ಪ್ರದೇಶವನ್ನು ನಿರ್ಮಾಣ ಮಾಡಿದನಂತ ಒಂದು ಕಡಗೆ ಅರಬೀಸಮುದ್ರದ ಅಪಾರವಾದ ಜಲರಾಶಿ, ಮತ್ತೊಂದು ಬದಿಗೆ ಅದಕ್ಕೆ ಸಮಾಂತರವಾಗಿ ಹಬ್ಬಿದ ಸಹ್ಯಾ-ದ್ರಿಯ ಪರ್ವತದ ಸಾಲು ಇವುಗಳ ನಡುವೆ ಕಂಡುಬರುವ ಕಿರಿಯಗಲಾದ ಬಯಲು ಪ್ರದೇಶವೇ ಕೊಂಕಣವು ಇದರ ದಕ್ಷಿಣ ತುದಿಯು ಕಾರವಾರಕ್ಕೆ ತಾಗಿದೆ ಉತ್ತರದ ತುದಿಯು ದಮಣಗಂಗೆಯೆಂಬ ನದಿಯವರೆಗ ಮುಟ್ಟಿದೆ ಈ ಭಾಗವು ಸುಮಾರು ೫೦೦ ಮೈಲುಗಳಷ್ಟು ಉದ್ದವಾಗಿದೆ, ೫೦ ಮೈಲುಗಳಷ್ಟು ಅಗಲವಾಗಿದೆ ದಮಣಗಂಗೆಯ ಉತ್ತರದಲ್ಲಿ ಗುಜರಾಥದ ಬೆಳೆಯುಳ್ಳ ಪ್ರದೇಶವಿದೆ

ಮುಂಬಯಿ ರಾಜ್ಯದಲ್ಲಿ ಸುತ್ತಾಡಿ ಭೂಮಿಯ ಏರಿಳಿತಗಳನ್ನೂ ಬೆಟ್ಟ ಬಯಲುಗಳನ್ನೂ ನೀವು 'ನೋಡಿರುವಿರಿ ಈ ರಾಜ್ಯದಲ್ಲಿ ಸಹ್ಯಾದ್ರಿಯು ಸಾಲಾಗಿ ಹಬ್ಬಿದೆ ಅದರಲ್ಲಿ ಅನೇಕ ಉನ್ನತವಾದ ಗಿರಿಶಿಖರಗಳಿವೆ ಒಂದು ಬದಿಯಲ್ಲಿ ಸಮುದ್ರ ದಂಡೆಯ ಕರಾವಳಿ ಪ್ರದೇಶವಿದೆ ಮತ್ತೊಂದು ಬದಿಯಲ್ಲಿ ಎತ್ತರವಾದ ತಪ್ಪಲುಭೂಮಿ ಇರುವದು ಉತ್ತರದ ಒಳನಾಡು ಸಮುದ್ರದಿಂದ ದೂರವಾದ ಬಯಲು ಭೂಮಿ ಭೂರಚನೆಯ ವಿವಿಧತೆಯು ಈ ರಾಜ್ಯದ ಹವಾಮಾನದಲ್ಲಿಯೂ ಹೇಗೆ ಕಂಡುಬರುವದೆಂಬುದನ್ನು ತಿಳಿದುಕೊಳ್ಳಿರಿ.

# ಹವಾಮಾನ

ಸಮುದ್ರ ದಂಡೆಯ ಬಯಲು ಪ್ರದೇಶವನ್ನೇ ತೆಗೆದುಕೊಳ್ಳಿರಿ. ಈ ಭಾಗಕ್ಕೆ ಸಮುದ್ರವು ಸಮೀಪವಾಗಿದೆ ಸಮುದ್ರದಿಂದ ಬೀಸುವ ತಂಪು ಗಾಳಿಗಳು ಹಗಲಿನ ಹಾಗೂ ಬೇಸಿಗೆಯ ಬೇಗೆಯನ್ನು ಕಡಿಮೆ ಮಾಡುವವು ನೆಲದ ಕಡೆಯಿಂದ ಬೀಸುವ ಭೂಗಾಳಿಗಳು ಚಳಿಯನ್ನು ಕಡಿಮೆ ಮಾಡುವವು. ಇದರಿಂದ ಇಲ್ಲಿಯ ಹವೆಗೆ ಸಮಹವೆಯೆನ್ನುವರು ಚಳಿಗಾಲದಲ್ಲಿ ಇಲ್ಲಿ ಚಳಿಯು ತೀರ ಕಡಿಮೆ ಬೇಸಿಗೆಯಲ್ಲಿ ಉಗಿಯಿಂದ ಕೂಡಿದ ಉಷ್ಣತೆಯು ಮೈಗೆ ಒಂದೇ ಸವನೆ ಬೆವರು ತರುವದು ಮಳೆಗಾಲದಲ್ಲಿ ಸೂರ್ಯನ ದರುಶನವಿಲ್ಲ ವಿಪರೀತವಾದ ಮಳೆ ಬೀಳುವದು ಚಳಿಗಾಲ ಬೇಸಿಗೆಗಳ ಉಷ್ಣತಾ–ಮಾನದಲ್ಲಿ ಇಲ್ಲಿ ವಿಶೇಷವಾದ ಹೆಚ್ಚು ಕಡಿಮೆ ತೋರಿ ಬರುವದಿಲ್ಲ.

ಸಹ್ಯಾದ್ರಿಯ ಕೆಲವು ಶಿಖರಗಳು ೫೦೦೦ ಫೂಟುಗಳಷ್ಟು ಉನ್ನತ–ವಾಗಿವೆ ಇವುಗಳಲ್ಲಿ ಮಾಥೇರಾನ ಹಾಗೂ ಮಹಾಬಳೇಶ್ವರಗಳು ಒಳ್ಳೇ ಹೆಸರಾಗಿವೆ ಬೇಸಿಗೆಯಲ್ಲಿ ಈ ತಂಪು ಸ್ಥಳಗಳಿಗೆ ಅನೇಕ ಸಿರಿವಂತರು ಹೋಗುವದುಂಟು ಲೋಣಾವಳ ಮೊದಲಾದವುಗಳನ್ನು ಶ್ರೇಷ್ಠವಾದ ಆರೋಗ್ಯಧಾಮಗಳಾಗಿವೆ ಸಹ್ಯಾದ್ರಿಯ ಕೆಲವು ಶಿಖರಗಳಲ್ಲಿ ಇತಿಹಾಸದಲ್ಲಿ ಹೆಸರಾದ ಕೋಟೆಕೊತ್ತಳಗಳನ್ನು ನೀವು ಕಾಣಬಹುದು ಈ ಎತ್ತರವಾದ ಗಿರಿಶಿಖರಗಳಲ್ಲಿ ಬೇಸಿಗೆಯಲ್ಲಿಯೂ ಹವೆಯು ತಂಪಾಗಿರುವದು. ಒಳ್ಳೇ ಆಲ್ಹಾದಕರವೂ, ಆರೋಗ್ಯಕರವೂ ಆಗಿರುವದು ಎತ್ತರವಾದ ಸ್ಥಳಗಳು ಆದುದರಿಂದ ಚಳಿಗಾಲದಲ್ಲಿ ಚಳಿಯೂ ಹೆಚ್ಚು; ಮನ್ಸೂನ ಗಾಳಿಗೆ ಎದುರಾದ ಗಿರಿಶಿಖರಗಳಲ್ಲಿ ಮಳೆಯೂ ಹೆಚ್ಚು ಈ ರಾಜ್ಯದ ಕೆಲವು ನದಿಗಳು ಇಂಥ ಗಿರಿಶಿಖರಗಳ ಸೆರೆಯಲ್ಲಿಯೇ ಉಗಮಹೊಂದಿರುವವು ನಮ್ಮ ನಾಡಿನ ಮುಖ್ಯ ನದಿಯಾದ ಕೃಷ್ಣಾನದಿಯು ಮಹಾಬಳೇಶ್ವರದಲ್ಲಿ ಉಗಮ ಹೊಂದಿರುವದನ್ನು ನೀವು ಬಲ್ಲಿರಿ

ನಿಮಗೆ ಸಮೀಪವಾಗಿರುವ ಒಂದು ಕಣಿವೆಯ ಘಟ್ಟದ ಮಾರ್ಗದಿಂದ ಸಹ್ಯಾದ್ರಿಯನ್ನು ದಾಟಿರಿ. ಕಣಿವೆಯ ದಾರಿ ಹೇಗೆ ಸುತ್ತುಸುತ್ತಾಗಿ ಹೋಗುವದೆಂಬುದನ್ನು ನೀವು ನೋಡಿದಿರಲ್ಲವೆ? ಕಣಿವೆಯಲ್ಲಿ ಹಾದು ಹೋಗುವಾಗ್ಗೆ ಹವೆಯು ನಿಮಗೆ ಹೇಗೆ ಅನಿಸಿತು?

ಹವೆಯು ತಂಪಾಗಿರುವದನ್ನು ನೀವು ಕಂಡಿರಬಹುದು. ನಿಜವಿದೆ ನೀವು ಮಲೆನಾಡನ್ನು ಪ್ರವೇಶಿಸುತ್ತಿರುವಿರಿ 'ಮಲೆ' ಎಂದರೆ ಬೆಟ್ಟ ಮಲೆನಾಡು ಬೆಟ್ಟದ ನಾಡು ಸಹ್ಯಾದ್ರಿಯ ಇಳುಕಲಿನಲ್ಲಿ ಇದು ನೆಲಸಿರುವದು ಈ ಪ್ರದೇಶವು ಸುಮಾರು ೨೫ ಮೈಲುಗಳಷ್ಟು ಅಗಲವಾಗಿದೆ, ೩ ಸಾವಿರ ಫೂಟುಗಳಷ್ಟು ಎತ್ತರವಾಗಿದೆ ಇಲ್ಲಿ ಮಳೆಯೂ ೫೦ ಇಂಚುಗಳಿಗಿಂತ ಹೆಚ್ಚು ಆದುದರಿಂದ ಇಲ್ಲಿ ಕಾಡು ಬೆಳೆದಿರುವದು. ಭೂಮಿಯು ಯಾವಾಗಲೂ ಹಸಿರಿನಿಂದ ಕೂಡಿರುವದು ಸೃಷ್ಟಿಯ ವಿವಿಧವಾದ ಸೊಬಗು ಇಲ್ಲಿ ತುಂಬಿ ತುಳುಕುತ್ತಿದೆ ನಿಸರ್ಗದ ಸಂಪತ್ತಿಯೂ ಸಮೃದ್ಧವಾಗಿದೆ ಆದರೆ ಇಲ್ಲಿಯ ಹವೆಯು ಶೀತವಾಗಿರುವದು ಅನಾರೋಗ್ಯಕರವಾಗಿರುವದು ಚಳಿಜ್ವರ ಮೊದಲಾದ ಬೇನೆಗಳಿಗೆ ಮಲೆನಾಡು ತವರೂರು ಆಗಿದೆ ಮಲೆನಾಡಿನ ಈ ಕಷ್ಟಗಳನ್ನು ನಿವಾರಿಸಲು ಸರಕಾರವು ಇತ್ತೀಚೆಗೆ ಅನೇಕ ಯೋಜನೆಗಳನ್ನು ಮಾಡಿದೆ.

ಮಲೆನಾಡಿಗೆ ಹೊಂದಿಕೊಂಡಿರುವ ಭಾಗಗಳಿಗೆ 'ಮಲೆನಾಡ ಸೆರಗು' ಎನ್ನುವರು ಸೀರೆಯ ತುದಿಯಂತೆ ಈ ಭಾಗಗಳು ಮಲೆನಾಡಿನ ತುದಿ ಅಂಚುಗಳು ಧಾರವಾಡ, ಬೆಳಗಾವಿ, ಕೊಲ್ಹಾಪೂರ ಜಿಲ್ಹೆಗಳ ಕೆಲವು ಭಾಗಗಳು ಮಲೆನಾಡಿನ ಸೆರಗಿನಲ್ಲಿ ಸಮಾವೇಶವಾಗುವವು ಮಲೆನಾಡಿನ ಶೀತ ಹವೆ, ಹೆಚ್ಚು ಮಳೆ, ಹನ್ನೆರಡೂ ತಿಂಗಳಿನ ಹಸಿರು ನೆಲಗಳನ್ನು ಕೆಲ ಮಟ್ಟಿಗೆ ಮಲೆನಾಡಿನ ಸೆರಗಿನಲ್ಲಿಯೂ ನೀವು ಕಾಣುವಿರಿ

ಇಕೋ, ಇದು ನಮ್ಮ ಬೆಳವಲು ನಾಡು ಇದು ದಕ್ಷಿಣದ ತಪ್ಪಲಿನ ಒಂದು ಭಾಗವಾಗಿದೆ ಹಿಂದೆ ಹೇಳಿದಂತೆ ಈ ತಪ್ಪಲಿನ ಎತ್ತರವು ಒಂದು ಸಾವಿರ ಫೂಟುಗಳಿಗಿಂತಲೂ ಎಲ್ಲಿಯೂ ಕಡಿಮೆಯಾಗಿಲ್ಲ. ಇದು ಒಳನಾಡು, ಸಮುದ್ರದಿಂದ ದೂರವಾಗಿದೆ ವಿಷುವ ವೃತ್ತಕ್ಕೆ ಸಮೀಪವಾಗಿದೆ ಹೀಗೆ ಇದ್ದರೂ ಇದರ ಉಷ್ಣತೆಯು ಎಷ್ಟೋ ಮಟ್ಟಿಗೆ ಇದರ ಎತ್ತರದ ಮೂಲಕ ಕಡಿಮೆಯಾಗಿರುವದು ಆದರೆ ಹವೆಯಲ್ಲಿ ಆರ್ದ್ರತೆಯಿಲ್ಲ ತೀರ ಒಣ ಹವೆ, ರುಕ್ಷವಾದ ಬಯಲು ಭೂಮಿ ಹಸಿರು ಗಿಡಗಂಟಿಗಳು ತೀರ ಅಪರೂಪ ಏಕೆಂದರೆ ಮಳೆಯು ಇಲ್ಲಿ ಕಡಿಮೆಯಾಗುವದು ಇಲ್ಲಿಯ ಹವೆಯು ವಿಷಮವಾಗಿರುವದು ಚಳಿಗಾಲದ ಅವಧಿಯು ಅಲ್ಪವಾಗಿದೆ ಚಳಿಯೂ ಕಡಿಮೆ ಆದರೆ ಬೇಸಿಗೆಯು ಮಾತ್ರ ಉರಿ ಬಿಸಿಲಿನ ದಾಗಿರುವದು

ವರೆ, ಜೀವನಸತ್ವವು ನಾಶವಾಗಿ ಹೋಗುತ್ತದೆ ಕುದಿಸಿದ ನೀರಿನಲ್ಲಿ ಕ್ಷಾರವು ಅಲ್ಪಪ್ರಮಾಣದಲ್ಲಿ ಇರುವದರಿಂದ ಆ ನೀರನ್ನಾದರೂ ಆಹಾರದಲ್ಲಿ ಉಪಯೋಗಿಸಬೇಕು.

"ಕ" ಜೀವನ ಸತ್ವವನ್ನು ನಾವು ಸೇವಿಸದಿದ್ದರೆ ಒಸಡೆಗಳು ಉಬ್ಬಿ, ಅವುಗಳಿಂದ, ಮೂಗಿನಿಂದ ರಕ್ತಸ್ರಾವವಾಗುವದು ಅಲ್ಲದೆ ರೋಗಪ್ರತೀಕಾರಕ ಶಕ್ತಿಯೂ ಕಡಿಮೆಯಾಗುವದು ಹೀಗೆ ಆಗುವದಕ್ಕೆ "ಸ್ಕರ್ವಿ" ರೋಗವೆಂಬ ಹೆಸರು ಆದ್ದರಿಂದ "ಕ" ಜೀವನ ಸತ್ವವಿರುವ ಮೊಳಕೆ ಬಂದ ಧಾನ್ಯಗಳು, ನಿಂಬೆಯ ಜಾತಿಯ ಹಣ್ಣುಗಳು, ನೆಲ್ಲಿಕಾಯಿಗಳೂ ಇವು ಆಹಾರದಲ್ಲಿ ಆಗಾಗ ಸೇವಿಸುವದರಿಂದ ಸ್ಕರ್ವಿ ರೋಗದ ಭಯವು ...ಮ್ಮ ರೋಗ್ಯವು ಚನ್ನಾಗಿ ಉಳಿಯುತ್ತದೆ

### ೨ ಹಸಿರು ಕಾಯಿಪಲ್ಲೆಗಳು

ಪ್ರತಿ ನಿತ್ಯದ ಆಹಾರದಲ್ಲಿ ನಾವು ಅನೇಕ ಪ್ರಕಾರದ ಪಲ್ಲೆಗಳನ್ನು ಸಾಮಾನ್ಯವಾಗಿ ಸವತೇಕಾಯಿ, ಹೀರೇಕಾಯಿ, ಛಪ್ಪರ-ಬದನೆ, ಅವರೇಕಾಯಿ ಮುಂತಾದವುಗಳನ್ನು ಸೇವಿಸುತ್ತೇವೆ ಅಲ್ಲದೆ ರಾಜಗಿರಿ, ಹರವಿ, ಮೆಂತೆ, ಶಾವಿ, ಕುಸುಬೆ, ಕಡಲೆ, ಹುಣಸಿಕ್ಕ ಮುಂತಾದ ತೊಪ್ಪಲ ಪಲ್ಲೆಗಳನ್ನೂ ಸೇವಿಸುತ್ತೇವೆ. ಎಷ್ಟೋ ಧನಿಕರು, ಇವು ಬಡವರ ಪಲ್ಲೆಗಳೆಂದು ತಿಳಿದು ಅಸಡ್ಡೆ ಮಾಡುತ್ತಾರೆ ಇದರಿಂದ ಅವರಿಗೆ ಬಹಳ ಹಾನಿಯಾಗುತ್ತದೆ



ಆಕೃತಿ ೩೩ ಹಸಿರು ಕಾಯಿಪಲ್ಲೆಗಳು

ಇವೆಲ್ಲವುಗಳು ಹಸಿರಾಗಿದ್ದು, ಇದರಲ್ಲಿ ನೀರಿನ ಪ್ರಮಾಣವು ಹೆಚ್ಚು ಇರುತ್ತದೆ. ಆದ್ದರಿಂದ ನಮ್ಮ ಪಚನಕ್ಕೆ ಅವಶ್ಯವಾದ ಶುದ್ಧ ನೀರು ತಾನಾಗಿಯೇ ದೊರೆತಂತೆ ಆಗುವದು ಇವುಗಳು ಪಚನಕ್ಕೆ ಬಹಳ ಸುಲಭವಾಗಿರುವವು ಈ ಪಲ್ಲೆಗಳಲ್ಲಿ ಕ್ಷಾರಗಳೂ ನಾಕಷ್ಟು ಇರುತ್ತವೆ. ಇದರಿಂದ ಎಲುವು, ಹಲ್ಲುಗಳ ಬೆಳವಣಿಗೆಗೆ, ರಕ್ತದ ಶುದ್ಧೀಕರಣಕ್ಕೆ ಬಹಳ ಸಹಾಯವಾಗುತ್ತದೆ ಇವುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಸೇವಿಸಿದರೂ ಹಾನಿ

ಯಾಗದೆ ಮಲಬದ್ಧತೆಯ ನಿವಾರಣೆಯಾಗುತ್ತದೆ ಎಲ್ಲಕ್ಕೂ ಮುಖ್ಯವಾಗಿ ಇದರಲ್ಲಿ "ಅ" ಮತ್ತು "ಕ" ಈ ಜೀವನ ಸತ್ವಗಳು ಅಧಿಕ ಪ್ರಮಾಣ ದಲ್ಲಿ ಇರುತ್ತವೆ ಇದರಿಂದ ಶೀತರೋಗಗಳ ಭಯವು ತಪ್ಪುವದು. ಇದ ಲ್ಲದೆ ಇರುಳುಗಣ್ಣಿನ ಭಯವೂ ತಪ್ಪುವದು ಆದ್ದರಿಂದ ದಿನದ ಆಹಾರ ದಲ್ಲಿ ತಾಜಾ ಹಸಿರು ಕಾಯಿಪಲ್ಲೆಗಳನ್ನು ಸೇವಿಸುವದು ಎಲ್ಲ ದೃಷ್ಟಿ ಯಿಂದಲೂ ಉತ್ತಮವಾದದ್ದು.

## ೩ ಹಾಲು

ಹುಟ್ಟಿದ ಮಗುವು ಸುಮಾರು ೬-೮ ತಿಂಗಳ ವರೆಗೆ ಕೇವಲ ತಾಯಿಯ ಹಾಲಿನ ಮೇಲೆಯೇ ಬೆಳೆಯುತ್ತದೆ. ಬೇರೆ ಯಾವ ಆಹಾರವನ್ನೂ ಸೇವಿಸುವದಿಲ್ಲ. ಆದರೂ ಸಾಮಾನ್ಯವಾಗಿ ಅದರ ಎಲ್ಲ ಅವಯವಗಳ ಬೆಳವಣಿಗೆಯಾಗಲು ಯಾವ ಅಡ್ಡಿಯೂ ಕಾಣಬರುವದಿಲ್ಲ. ಇದರಿಂದ, ಆಹಾರ ದೃಷ್ಟಿ ಯಿಂದ ಹಾಲು ಎಷ್ಟು ಸ್ವಯಂಪೂರ್ಣವಾದುದು ಎಂಬುದು ತಿಳಿಯುತ್ತದೆ. ತಾಯಿಯ ಹಾಲಿನಲ್ಲಿ ಮತ್ತು ಪ್ರಾಣಿಗಳ ಹಾಲಿನಲ್ಲಿ ಸಾಮಾನ್ಯವಾಗಿ ಆಹಾರದ ಎಲ್ಲ ಘಟಕಗಳೂ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇದ್ದೇ ಇರುತ್ತವೆ ಆದ್ದರಿಂದ ಹಾಲು ಎಲ್ಲ ಆಹಾರ ಗಳಿಗಿಂತ "ಪರಿಪೂರ್ಣ ಆಹಾರ"ವೆಂದರೆ ತಪ್ಪಾಗಲಾರದು



ಆಕೃತಿ ೩೪ ಹೈನದ ಪದಾರ್ಥಗಳು

ಹಾಲಿನ ೧೦೦ ಕ್ಕೆ ಸುಮಾರು ೮೭ ರಷ್ಟು ನೀರು ೪ ರಷ್ಟು ಸನಾರ ಜನಕ, ೫ ರಷ್ಟು ಸಕ್ಕರೆ, ೪ ರಷ್ಟು ಕೊಬ್ಬು, ೧ ರಷ್ಟು ಕ್ಷಾರ ಕಂಡುಬರು ತ್ತವೆ. ಅಲ್ಲದೆ ದೇಹದ ಬೆಳವಣಿಗೆ ನಾಕಷ್ಟು "ಅ, ಬ, ಡ" ಜೀವನ ಸತ್ವಗಳೂ ಇರುತ್ತವೆ ಆದ್ದರಿಂದ ಹಾಲಿನಿಂದ ಶಕ್ತಿ, ಚೈತನ್ಯ, ಉತ್ಪನ್ನ ವಾಗುವದಲ್ಲದೆ, ಎಲುವುಗಳ ಮತ್ತು ರಕ್ತದ ಯೋಗ್ಯ ಬೆಳವಣಿಗೆಯಾಗು ತ್ತದೆ ಮುಖ್ಯವಾಗಿ ಇದರಲ್ಲಿಯ ಸನಾರಜನಕ ಘಟಕವು ಪಚನಕ್ಕೆ ಹಗುರು ಆಗಿರುವದರಿಂದ ಬೆಳೆಯುವ ಮಕ್ಕಳಿಗೆ ಇದನ್ನು ಕೊಡುತ್ತಾರೆ ಇದರಿಂದ ದೇಹದ ಎತ್ತರ. ತೂಕ ಬೇಗನೆ ಹೆಚ್ಚುತ್ತವೆ ಬೇರೆ ಯಾವದೇ ಒಂದು

ಆಹಾರದಲ್ಲಿ ಹಾಲಿನಲ್ಲಿದ್ದಷ್ಟು ಆಹಾರಸತ್ವಗಳು ಇರುವದಿಲ್ಲ. ಆದ್ದರಿಂದಲೇ ಬೆಳೆಯುವವರೂ, ರೋಗಿಗಳೂ ಹಾಲನ್ನು ಸೇವಿಸುತ್ತಾರೆ.

ಇದೇ ಮೇರೆಗೆ ಹಾಲಿನಿಂದ ಸಿದ್ಧವಾಗುವ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಇವೇ ಮೊದಲಾದ ಹೈನದ ಪದಾರ್ಥಗಳಲ್ಲಿಯೂ ಕೂಡ ಹಾಲಿನಲ್ಲಿ ಇರುವ ಎಲ್ಲ ಪೋಷಕದ್ರವ್ಯಗಳೂ ಬೇರೆಬೇರೆ ರೂಪಗಳಲ್ಲಿ ಇರುವವು.

## ೪ ಹಣ್ಣುಗಳು

ಹಣ್ಣುಗಳನ್ನು ಆಹಾರವೆಂದು ಅರಿತು ನಾವು ಉಪಯೋಗಿಸುವದು ಕಡಿಮೆ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿ ದಿನದ ಊಟದಲ್ಲಿ ಹಣ್ಣುಗಳಿಗೆ ವಿಶಿಷ್ಟ ಸ್ಥಾನವಿದೆ. ಸಾಮಾನ್ಯವಾಗಿ ಊಟದ ನಂತರ ಅನೇಕ ಪ್ರಕಾರದ ಹಣ್ಣುಗಳನ್ನು ಅವರು ಸೇವಿಸುತ್ತಾರೆ. ನಾವಾದರೂ ಕಲ ಪ್ರಕಾರದ (ಬಾಳೆ, ಮಾವು ಮುಂ) ಹಣ್ಣುಗಳನ್ನು ಸೀಕರಣೆಯ ರೂಪದಲ್ಲಿ ಸೇವಿಸುತ್ತೇವೆ. ಆದರೂ ಹಣ್ಣಿನ ಪ್ರಮಾಣವು ನಮ್ಮ ಆಹಾರದಲ್ಲಿ ಕಡಿಮೆಯೇ.



ಆಕೃತಿ ೬೫ ಹಣ್ಣುಗಳು

ಹಣ್ಣುಗಳಲ್ಲಿ ಉಳಿದ ಆಹಾರಗಳಲ್ಲಿರದ ಎಷ್ಟೋ ವೈಶಿಷ್ಟ್ಯಗಳಿವೆ. ಮೊದಲನೆಯದಾಗಿ ಪಚನಕ್ಕೆ ಅವು ಹಗುರಾಗಿರುತ್ತವೆ. ಉಪಯುಕ್ತವಾದ ಅನೇಕ ಆಹಾರದ ಘಟಕಗಳು ಹಣ್ಣುಗಳಲ್ಲಿ ಇರುತ್ತವೆ. ಹಣ್ಣುಗಳಲ್ಲಿ ಸಹಜವಾಗಿ ಪಚನವಾಗುವ ಸ್ವಾಭಾವಿಕವಾದ ಒಂದು ಬಗೆಯ ಸಕ್ಕರೆ ಇರುವದು. ನೀರಿನ ಪ್ರಮಾಣವು ನೂರಕ್ಕೆ ಸುಮಾರು ೭೦ರಿಂದ ೮೫ರ ವರೆಗೆ ಇರುತ್ತದೆ. ಪಚನಕ್ರಿಯೆಗೆ ಅವಶ್ಯವಾದ ಎಷ್ಟೋ ಶುದ್ಧ ನೀರು ಇಲ್ಲಿಯೇ ದೊರೆಯುತ್ತದೆ. ಅಲ್ಲದೆ ಆ ನೀರಿನಲ್ಲಿ ಅನೇಕ ಪ್ರಕಾರದ ಉಪಯುಕ್ತ ಕ್ಷಾರಗಳು ಕರಗಿರುತ್ತವೆ. ಎಲುವು, ಹಲ್ಲುಗಳ ಬೆಳವಣಿಗೆಗೆ, ರಕ್ತದ ಶುದ್ಧೀಕರಣಕ್ಕೆ ಮತ್ತು ಮಲಬದ್ಧತೆಯ ನಿವಾರಣೆಗೆ ಇದರಿಂದ ಬಹಳ ಸಹಾಯವಾಗುತ್ತದೆ.

ಸಕ್ಕರೆಯ ಪ್ರಮಾಣವು ಬೇರೆ ಬೇರೆ ಹಣ್ಣುಗಳಲ್ಲಿ ನೂರಕ್ಕೆ ೧೫ರಿಂದ ೨೫ರ ವರೆಗೆ ಇರುತ್ತದೆ. ಬಾಳೆ, ಕಿತ್ತಳೆ, ಮೋಸಂಬಿ, ಚಿಕ್ಕು ಮಾವು,

ವೇರಲ, ಸೀತಾಫಲ ಮುಂತಾದ ಹಣ್ಣುಗಳು ಸಾಕಷ್ಟು ಸಿಹಿ ಇರುತ್ತವೆ ಇವುಗಳ ಸೇವನೆಯಿಂದ ಶಕ್ತಿ ಮತ್ತು ಚೈತನ್ಯ ಸ್ವಲ್ಪ ವೇಳೆಯಲ್ಲಿ ದೇಹಕ್ಕೆ ದೊರೆಯುತ್ತದೆ. ಕೊನೆಯದಾಗಿ ಅನೇಕ ತಾಜಾ ಹಣ್ಣುಗಳಲ್ಲಿ ಅ ಮತ್ತು ಕ ಜೀವನಸತ್ವಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತದೆ. ಈ ಜೀವನ ಸತ್ವಗಳ ಮಹತ್ವವನ್ನು ಹಿಂದೆಯೇ ಹೇಳಿದೆ ಆದ್ದರಿಂದ ನಮ್ಮ ಆಹಾರ ದಲ್ಲಿ ಹೆಚ್ಚೆಚ್ಚು ಹಣ್ಣುಗಳನ್ನು ಸೇವಿಸುವದು ಎಲ್ಲ ರೀತಿಯಿಂದಲೂ ಬಹಳ ಯೋಗ್ಯವಾದದ್ದು

ಪ್ರಕರಣ ೧೫

# ತೃಣಧಾನ್ಯಗಳು, ಅವುಗಳ ಆಹಾರ ಮೌಲ್ಯ

## ೧. ಅಕ್ಕಿ

ಅಕ್ಕಿಯು ಎಷ್ಟೋ ಜನರ ಮುಖ್ಯ ಆಹಾರವಾಗಿದೆ. ಅದರಲ್ಲಿರುವ ಆಹಾರದ ಮುಖ್ಯ ಘಟಕಗಳಾವವು ? ಅವುಗಳ ಪ್ರಯೋಜನವೇನು ? ಇದನ್ನು ಮೊದಲು ತಿಳಿಯುವದು ಅವಶ್ಯ.



ಆಕೃತಿ ೩೬ ಭತ್ತ

ಅಕ್ಕಿಯಲ್ಲಿ ನೂರಕ್ಕೆ ಸುಮಾರು ೭೬ರಷ್ಟು ಪಿಷ್ಟ, ೮ರಷ್ಟು ಪ್ರೋಟೀನ ಮತ್ತು ಉಳಿದ ಭಾಗ ಕೊಬ್ಬು, ಕ್ಷಾರ, ನೀರಿನಿಂದ ಕೂಡಿರುತ್ತದೆ ಅಂದ ಮೇಲೆ ಮುಖ್ಯವಾಗಿ ನಾವು ಅಕ್ಕಿಯನ್ನು ಪಿಷ್ಟ ಮತ್ತು ಪ್ರೋಟೀನ ಅಥವಾ ಸಾರಜನಕ ಪದಾರ್ಥಗಳಿಗಾಗಿ ಉಪ ಯೋಗಿಸುತ್ತೇವೆ ಪಿಷ್ಟದಿಂದ ಚೈತನ್ಯ ಮತ್ತು ಉಷ್ಣತೆ ದೊರೆಯುತ್ತದೆ ಪ್ರೋಟೀನದಿಂದ ಜೀವಕಣಗಳ ಉತ್ಪತ್ತಿಯಾಗಿ ಬೆಳವಣಿಗೆಗೆ ಮತ್ತು ಸವಕಳಿ ತುಂಬುವದಕ್ಕ ಸಹಾಯವಾಗುತ್ತದೆ.

ಅದಲ್ಲದೆ ಅಕ್ಕಿಯ ಮೇಲ್ಮೈ (ತವಡು) ಮತ್ತು ಅಂಕುರದಲ್ಲಿ 'ಬ' ಜೀವನ ಸತ್ವವಿರುತ್ತದೆ. ಪಾಲಿಶ್ ಮಾಡಿಸುವದರಿಂದ ಅಕ್ಕಿಯ ತವಡು ಮತ್ತು ಅಂಕುರ ಹಾರಿ ಹೋಗಿ '**ಬ**' ಜೀವನಸತ್ವವು

ನಾಶವಾಗಿ ಹೋಗುತ್ತದೆ ಆದ್ದರಿಂದ ಅಕ್ಕಿಯನ್ನು ಪಾಲಿಸ್ ಮಾಡಿಸುವದು ಬಹಳ ತಪ್ಪು. ಎಷ್ಟೋ ಜನರು ಅಕ್ಕಿಯನ್ನು ಬೆಳ್ಳಗೆ ಮಾಡುವದಕ್ಕಾಗಿ ಹೀಗೆ ಮಾಡುತ್ತಾರೆ ಹಾಗೆಂದಿಗೂ ಮಾಡಬಾರದು

### ೨ ಗೋದಿ

ಜಗತ್ತಿನ ಬಹಳ ಜನರಿಂದ ಉಪಯೋಗಿಸಲ್ಪಡುವ ಧಾನ್ಯದಲ್ಲಿ ಗೋದಿಯೇ ಪ್ರಧಮವಾದುದು ಇದರಲ್ಲಿ ಮುಖ್ಯವಾಗಿ ಪಿಷ್ಟ, ಆಮೇಲೆ ಪ್ರೊಟೀನ ಇರುತ್ತವೆ ಅಕ್ಕಿಗಿಂತ ಜೋಳದಲ್ಲಿ, ಜೋಳಕ್ಕಿಂತ ಗೋದಿಯಲ್ಲಿ ಪ್ರೊಟೀನದ ಪ್ರಮಾಣ ಹೆಚ್ಚು ಆದ್ದರಿಂದ ಬೆಳವಣಿಗೆಗೆ ಇದು ಹೆಚ್ಚು ಸಹಾಯನಾಗುತ್ತದೆ ಶ್ರಮಜೀವಿಗಳಿಗೆ ಇದು ಒಂದು ಉಪಯುಕ್ತ ಧಾನ್ಯವಾಗಿದೆ



ಆಕೃತಿ ೩೭ ಗೋದಿ

ಗೋದಿಯನ್ನು ಮೊಳಿಕೆಯೊಡೆಯುವಂತೆ ಮಾಡಿದರೆ ಇದರಲ್ಲಿ ಅ, ಬ ಜೀವನಸತ್ವಗಳು ಉತ್ಪನ್ನವಾಗುತ್ತವೆ. ಗೋದಿಯಲ್ಲಿ ಜೋಳಕ್ಕಿಂತ ಸಕ್ಕರೆಯ ಪ್ರಮಾಣವು ಹೆಚ್ಚಿಗೆ ಇರುವದರಿಂದ ಜೋಳದ ರೊಟ್ಟಿಗಿಂತ ಚಪಾತಿಯು ಸಿಹಿಯಾಗಿ ರುಚಿಕರವಾಗಿರುತ್ತದೆ

### ೩ ಜೋಳ

ಜೋಳವು ಬೆಳವಲ ಪ್ರದೇಶದಲ್ಲಿಯ ಜನರ ಆಹಾರವಾಗಿರುತ್ತದೆ. ಮುಖ್ಯವಾಗಿ ನೂರಕ್ಕೆ ೭೦ರಷ್ಟು ಪಿಷ್ಟವು ಇರುತ್ತದೆ ಅಲ್ಲದೆ ಅಕ್ಕಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರೊಟೀನ, ಕ್ಷಾರ ಮತ್ತು ಕೊಬ್ಬು ಇರುತ್ತವೆ ಆದ್ದರಿಂದ ಶ್ರಮಜೀವಿಗಳು ಜೋಳವನ್ನು ಹಚ್ಚಾಗಿ ತೆಗೆದುಕೊಳ್ಳುತ್ತಾರೆ.



ಆಕೃತಿ ೩೮ ಜೋಳ

### ೪ ಸೆಜ್ಜೆ

ಸೆಜ್ಜೆಯು ಸಾಮಾನ್ಯವಾಗಿ ಜೋಳಕ್ಕಿಂತ ಅಗ್ಗವಾಗಿರುವದರಿಂದ ಬಡವರು ಹಚ್ಚಾಗಿ ಉಪಯೋಗಿಸುತ್ತಾರೆ. ಇದರಲ್ಲಿ ಅಕ್ಕಿ, ಜೋಳಗಳಲ್ಲಿಗಿಂತ ಹೆಚ್ಚು ಪ್ರೊಟೀನ ಇರುತ್ತದೆ ಅಲ್ಲದೆ ಅಕ್ಕಿ, ಜೋಳಗಳಿಗಿಂತ ಹೆಚ್ಚು ಕೊಬ್ಬು, ಪಿಷ್ಟ, ಕ್ಷಾರಗಳಿರುತ್ತವೆ ಆದ್ದರಿಂದ ಒಂದು ಸೆಜ್ಜೆಯ ರೊಟ್ಟಿಯು ಅಷ್ಟೇ ಪ್ರಮಾಣದ ಗೋದಿಯ

ಇಲ್ಲವೆ ಜೋಳದ ರೊಟ್ಟಿಗಿಂತ ಹೆಚ್ಚು ಶಕ್ತಿ ಮತ್ತು ಚೈತನ್ಯ ಕೊಡ ಬಲ್ಲದು.


ಆಕೃತಿ ೩೯ ಸಜ್ಜಿ

ಗುಜರಾಥದ ಜನರು ಸಜ್ಜಿಯನ್ನು ತಮ್ಮ ಆಹಾರದಲ್ಲಿ ಹೆಚ್ಚಾಗಿ ತೆಗೆದುಕೊಳ್ಳುವರೆಂಬುದನ್ನು ನೀವು ಭೂಗೋಲದಲ್ಲಿ ಓದಿರುವಿರಿ ಅಲ್ಲಿ ಸಜ್ಜಿ ಹೆಚ್ಚಾಗಿ ಬೆಳೆಯುವದು.

ಇದೇ ಮೇರೆಗೆ ಮಹಾರಾಷ್ಟ್ರದ 'ದೇಶದ' ಭಾಗದಲ್ಲಿ ಜೋಳವನ್ನೇ ಹಚ್ಚಾಗಿ ಬೆಳೆಯುವರು. ಜೋಳವು ಅಲ್ಲಿಯ ಜನರ ಮುಖ್ಯ ಆಹಾರವು ಕೊಂಕಣದ ಜನರಿಗೆ ಅಲ್ಲಿ ಬೆಳೆಯುವ ಅಕ್ಕಿಯೇ ಮುಖ್ಯ ಆಹಾರವು. ಕನ್ನಡ ನಾಡಿನ ಜನರು ಜೋಳ-ಗೋದಿಗಳನ್ನು ಹೆಚ್ಚಾಗಿ ಬೆಳೆಯುವರು ಹಾಗೂ ಆಹಾರದಲ್ಲಿ ಉಪಯೋಗಿಸುವರು.

ಪ್ರಕರಣ ೧೬

# ಕೆಲವು ಮಾದಕ ಪದಾರ್ಥಗಳಿಂದಾಗುವ ದುಷ್ಪರಿಣಾಮಗಳು

### ೧ ತಂಬಾಕು

ಜಗತ್ತಿನ ಎಲ್ಲ ಮೂಲೆಗಳಲ್ಲಿ ಕೂಡ ಅನೇಕ ಜನರು ತಂಬಾಕನ್ನು ಅನೇಕ ರೀತಿಯಿಂದ ಉಪಯೋಗಿಸುವದನ್ನು ನೋಡುತ್ತೇವೆ ಚಹ ಮತ್ತು ತಂಬಾಕು ಇವುಗಳ ವಿಷಯ ಅರಿಯದವರೇ ಇಲ್ಲವೆಂದು ಹೇಳಬಹುದು ತಂಬಾಕನ್ನು ಮುಖ್ಯವಾಗಿ ಮೂರು ವಿಧವಾಗಿ ಉಪಯೋಗಿಸುತ್ತಾರೆ ಸೇದುವದು, ತಿನ್ನುವದು ಮತ್ತು ಮೂಸುವದು (ನಾಶೀಪುಡಿ ಏರಿಸುವದು) ನಾಶೀಪುಡಿಯಲ್ಲಿಯೂ ತಂಬಾಕವಿರುತ್ತದೆ ಎಂಬುದು ನಿಮಗೆ ಗೊತ್ತಿರಬಹುದು ಅನೇಕ ಜನರು ತಂಬಾಕದ ಗುಲಾಮರಾದದ್ದನ್ನು ನಾವು ನೋಡುತ್ತೇವೆ ಹೀಗೆ ತಂಬಾಕದ ಚಟಕ್ಕೆ ಜನ ಏಕೆ ಮಾರುಹೋಗುವರು ಎಂಬುದನ್ನು ನಾವು ತಿಳಿಯಬೇಕು.

ತಂಬಾಕದಲ್ಲಿ “ ನಿಕೋಟೀನ ” ಮತ್ತು ಬೇರೆ ಕೆಲ ಉತ್ತೇಜಕ ದ್ರವ್ಯಗಳಿರುತ್ತವೆ ಅವುಗಳಿಂದ ಮಿದುಳು ಮತ್ತು ಹೃದಯದ ಮೇಲೆ ಪರಿಣಾಮವಾಗಿ ಅವುಗಳ ಮೇಲಿದ್ದ ಭಾರ–ದಣಿವು ಕಡಿಮೆಯಾದಂತೆ ಭಾಸವಾಗುತ್ತದೆ. ಇದರಿಂದ ದಣಿವು ಬೇಸರಿಕೆಗಳು ಮರೆತು ಮನಸ್ಸಿಗೆ ಆನಂದವೆನಿಸುತ್ತದೆ. ಆದರೆ ಹೆಚ್ಚಿನ ಪ್ರಮಾಣದಲ್ಲಿ ಇದನ್ನು ಸೇವಿಸಿದರೆ ಹಾನಿಯಾಗುವದು, ಆರೋಗ್ಯವೂ ಕೆಡುವದು; ನೀತಿಯೂ ಕೆಡುವ ಸಂಭವವಿದೆ ಇದಲ್ಲದೆ ತಂಬಾಕು ತಿನ್ನುವವರು ವಿಚಾರಿಸದೆ ಎಲ್ಲ ಕಡೆಗೂ ಉಗುಳುವದನ್ನು ನೀವು ನೋಡುವಿರಿ. ಇದರಿಂದ ಸ್ವಚ್ಛತೆಯೂ ಹಾಳಾಗುವದು. ರೋಗಗಳ ಪ್ರಸಾರಕ್ಕೂ ಸಹಾಯವಾಗುವದು. ಅಂತೆಯೇ ನಮ್ಮ ಹಿತವನ್ನು ಬಯಸುವ ಹಿರಿಯರೆಲ್ಲರೂ ತಂಬಾಕನ್ನು ಯಾವದೇ ರೂಪದಲ್ಲಿ ಸೇವಿಸದಿರಲು ಹೇಳಿರುವರು

## ೨. ಶೇಂದಿ

ಸೆರೆ, ಶೇಂದಿ ಮುಂತಾದವುಗಳೆಲ್ಲ ಮಾದಕ ಪೇಯಗಳೇ. ಇವೆಲ್ಲವುಗಳಲ್ಲಿ ಬೇರೆ ಬೇರೆ ಪ್ರಮಾಣದ ಮದ್ಯಾರ್ಕವು ಇರುತ್ತದೆ ಇದನ್ನೂ ಅಲ್ಪ ಪ್ರಮಾಣದಲ್ಲಿ ಔಷಧದಂತೆ ತೆಗೆದುಕೊಂಡರೆ, ಪಚನಕ್ಕೆ ಸಹಾಯವಾಗುವದಲ್ಲದೆ, ಮೆದುಳು ಮತ್ತು ಹೃದಯಗಳು ಉತ್ತೇಜಿತವಾಗಿ ಮನಸ್ಸು ಕಲಕಾಲ ಉಲ್ಲಸಿತವಾಗಿರುತ್ತದೆ. ಎಚ್ಚರಿಕೆ ತಪ್ಪಿದವರಿಗೆ ಎಷ್ಟೋ ಸಾರೆ ಇದನ್ನು ಕೊಡುತ್ತಾರೆ ಪೇಯವೆಂದು ಹೆಚ್ಚಿನ ಪ್ರಮಾಣದಲ್ಲಿ ಇವುಗಳನ್ನು ತೆಗೆದುಕೊಂಡರೆ, ಹಾನಿ ತಪ್ಪಿದ್ದಲ್ಲ. ಪದೇ ಪದೇ ಅದನ್ನೇ ಸೇವಿಸಬೇಕೆಂಬ ಚಟವು ಉತ್ಪನ್ನವಾಗುತ್ತದೆ. ಅದರ ಪರಿಣಾಮವಾಗಿ ಪಚನೇಂದ್ರಿಯಗಳಿಗೆ ಬಾವು ಬಂದು, ಮಹತ್ವದ ಅಂತರಿಂದ್ರಿಯಗಳಾದ ಯಕೃತ್ತು, ಫುಪ್ಫುಸ, ಹೃದಯ, ಮಿದುಳು ಇವು ರೋಗಕ್ಕೆ ಬಲಿಯಾಗುವವು. ರೋಗಪ್ರತೀಕಾರಕ ಶಕ್ತಿಯು ಕಡಿಮೆಯಾಗುತ್ತ ಹೋಗುತ್ತದೆ. ಅದರ ಪರಿಣಾಮವಾಗಿ ಯಾವ ರೋಗವೂ ಆತನಲ್ಲಿ ಮನೆಮಾಡಿಕೊಳ್ಳಬಹುದು. ಮದ್ಯಸೇವನೆಯು ಜನರನ್ನು ಅಲ್ಪಾಯುಷಿಗಳನ್ನಾಗಿ ಮಾಡುತ್ತದೆ

ಬಹಳ ಮದ್ಯ ಸೇವಿಸುವದರಿಂದ ಬುದ್ಧಿ ಅಂಕಿತದಲ್ಲಿ ಉಳಿಯುವದಿಲ್ಲ. ಸ್ಮರಣಶಕ್ತಿ ಕಡಿಮೆಯಾಗುತ್ತದೆ ಪ್ರೇಮ, ಕರ್ತವ್ಯ, ಹೊಣೆಗಾರಿಕೆಯಂಥ ಉಚ್ಚ ಭಾವನೆಗಳು ನಾಶಹೊಂದಿ ಮನುಷ್ಯನು ಪಶುವಿನಂತೆ

ನಡೆದುಕೊಳ್ಳುವನು ಎಂಥ ಅಪರಾಧವನ್ನು ಮಾಡಲೂ ಆತನು ಹಿಂಜರಿಯುವದಿಲ್ಲ

ಒಟ್ಟಿನಲ್ಲಿ ಮದ್ಯಸೇವನೆಯಿಂದ ಶರೀರ ಮತ್ತು ನೀತಿಗಳೆರಡೂ ಪೂರ್ಣವಾಗಿ ಹಾಳಾಗುವವು ಆದ್ದರಿಂದಲೇ ಈಗ ನಮ್ಮ ಪ್ರಾಂತದಲ್ಲಿ ಪಾನಪ್ರತಿಬಂಧ ಜಾರಿಯಲ್ಲಿದೆ. ಅದರ ಪರಿಣಾಮವಾಗಿ ಕುಡಿಯುವದನ್ನು ಬಿಟ್ಟ ಬಡವರ ಎಷ್ಟೋ ಕುಟುಂಬಗಳು ಇಂದು ಹೊಟ್ಟೆ ತುಂಬ ಊಟ ಮಾಡಿ ಸುಖದಿಂದ ಇರುವಂತೆ ಆಗಿದೆ.

ಪ್ರಕರಣ ೧೭

# ಕೆಲವು ರೋಗಗಳು ಮತ್ತು ಅವುಗಳ ಪ್ರತಿಬಂಧಕ ಉಪಾಯಗಳು

## (ಅ) ನೀರಿನ ಮುಖಾಂತರವಾಗಿ ಆಗುವ ರೋಗಗಳು

### ೧ ಕಾಲರಾ (ಮಾರಿಕಾಬೇನೆ)

**ಉತ್ಪತ್ತಿ :—** ಇದೊಂದು ಸಂಸರ್ಗಜನ್ಯ ರೋಗವು. ಅಲ್ಪವಿರಾಮ ಚಿಹ್ನದಂತಿರುವ ಅತಿ ಸೂಕ್ಷ್ಮವಾದ ಜಂತುಗಳು ಕಾಲರಾ ರೋಗಿಯ ಉಗಳು, ಕಾರಿಕೆ, ಮಲ, ಮೂತ್ರಗಳಿಂದ ಹೊರಗೆ ಬರುತ್ತವೆ. ಮತ್ತು ಅನೇಕ ರೀತಿ




ಆಕೃತಿ ೪೦ ನೀರಿನ ಮುಖಾಂತರವಾಗಿ ಆಗುವ ರೋಗಗಳು.

ಯಿಂದ ಹಾಲು, ನೀರು, ಅನ್ನ ಮುಂತಾದವುಗಳ ಮುಖಾಂತರ ಮನುಷ್ಯನ ಹೊಟ್ಟೆಯಲ್ಲಿ ಸೇರುತ್ತವೆ.

**ರೋಗ ಪ್ರಸಾರ**.— ಕಾಲರಾ ರೋಗಿಯ ಕಾರಿಕೆ, ಮಲ ಮುಂತಾದವುಗಳನ್ನು ಬಾವಿಯ ಹತ್ತಿರ ಚಲ್ಲಿದರೆ, ನೀರಿನೊಡನೆ ಜಂತುಗಳು ನೆಲದಲ್ಲಿ ಇಂಗಿ, ಬಾವಿಯ ನೀರಿನೊಡನೆ ಸೇರಬಹುದು. ಆ ನೀರನ್ನು ಊರ ಜನರು ಉಪಯೋಗಿಸುವದರಿಂದ ಅವರೆಲ್ಲರಿಗೂ ಅದು ಹಬ್ಬುವ ಸಂಭವವಿರುತ್ತದೆ

ಕಾಲರಾ ಬೇನೆ ಬಂದ ರೋಗಿಯ ಅರಿವೆಗಳನ್ನು ನದಿಯಲ್ಲಿ ಒಗೆಯುವದು ಇಲ್ಲವೆ ರೋಗಿಯು ಅಲ್ಲಿ ಸ್ನಾನ ಮಾಡುವದು, ಇವುಗಳಿಂದಲೂ ನೀರಿನಲ್ಲಿ ಜಂತುಗಳ ಪ್ರಸಾರವಾಗುತ್ತದೆ ಜಾತ್ರೆಗಳಲ್ಲಿ ಅಂಥ ನೀರಿನಲ್ಲಿ ಅನೇಕರು ಸ್ನಾನ ಮಾಡುವದರಿಂದ, ನೀರು ಕುಡಿಯುವದರಿಂದ ಎಲ್ಲರಿಗೂ ಅದು ಹಬ್ಬುತ್ತದೆ ಅಂಥ ಯಾತ್ರಿಕರು ತಮ್ಮ ಊರಿಗೆ ಹೋಗಿ ಅಲ್ಲಿಯೂ ರೋಗ ಪ್ರಸಾರ ಮಾಡಲು ಕಾರಣರಾಗಬಹುದು.

ಗವಳಿಗರು ರೋಗಜಂತುಗಳಿದ್ದ ಇಂಥ ನೀರನ್ನು ಹಾಲಿನಲ್ಲಿ ಕೂಡಿಸುವದರಿಂದಲೂ ಅದು ಹಬ್ಬುತ್ತದೆ ರೋಗಿಯ ಆರೈಕೆ ಮಾಡುವವರು ಜಂತುನಾಶಕ ದ್ರವ್ಯಗಳಿಂದ ಸ್ವಚ್ಛವಾಗಿ ಕೈತೊಳೆದುಕೊಳ್ಳದೆ ಉಳಿದವರಿಗೆ ಆಹಾರ ಉಣಬಡಿಸಿದರೂ ಪ್ರಸಾರವಾಗುವದು. ಹೆಚ್ಚಾಗಿ ನೊಣಗಳು ರೋಗಿಯ ಕಾರಿಕೆಯ ಮೇಲೆ ಕುಳಿತು ಆಮೇಲೆ ಉಳಿದವರ ಅನ್ನದ ಮೇಲೂ ಕೂಡುವದರಿಂದ ರೋಗ ಪ್ರಸಾರವಾಗುವದು.

## ಪ್ರತಿಬಂಧಕ ಉಪಾಯುಗಳು

೧ ನೀರು ಹಾಗೂ ಎಲ್ಲ ಪೇಯಗಳನ್ನು ಕುದಿಸಿ ಕುಡಿಯಬೇಕು.

೨ ನೊಣಗಳು ಕೂಡದಂತೆ ಆಹಾರ ಪದಾರ್ಥಗಳನ್ನು ಮುಚ್ಚಿಡಬೇಕು, ತಂಗಳ ತಿನ್ನಬಾರದು.

೩ ದೇಹದಲ್ಲಿ ರೋಗಪ್ರತಿಬಂಧಕ ಶಕ್ತಿಯನ್ನು ಪಡೆಯಲು ಕಾಲರಾ ಪ್ರತಿಬಂಧಕ ಇನಾಕ್ಯುಲೇಶನ್ ಮಾಡಿಸಿಕೊಳ್ಳಬೇಕು.

೪ ರೋಗಿಯ ಮಲಮೂತ್ರಗಳಲ್ಲಿ ಜಂತುವಿನಾಶಕ ಗುಣಧರ್ಮವಿರುವ ಕಾರ್ಬಾಲಿಕ್ ಲೋಶನ್ ಕೂಡಿಸಿ ಜಲಾಶಯದಿಂದ ದೂರ ಹುಗಿಯಬೇಕು. ಇದಲ್ಲದೆ ರೋಗಿಯ ಬಟ್ಟೆ, ಪಾತ್ರೆಗಳನ್ನು ಕುದಿಯುವ ನೀರಿನಲ್ಲಿ ಇಟ್ಟು ಜಂತು ನಾಶಮಾಡಬೇಕು.

೫ ರೋಗಿಯ ಶುಶ್ರೂಷೆ ಮಾಡುವವರು ಆರೈಕೆಯ ನಂತರ, ಜಂತುನಾಶಕ ಔಷಧದಿಂದ ಕೈತೊಳೆದುಕೊಳ್ಳಬೇಕು.

೬ ಮನೆಯಲ್ಲಿ ನೊಣಗಳಾಗದಂತೆ ಸ್ವಚ್ಛತೆಯಿಡಬೇಕು. ನೀರು ಹರಿಯುವಲ್ಲಿ ಫಿನೈಲ ಇಲ್ಲವೆ ಬೇರೆ ಜಂತುನಾಶಕ ಔಷಧ ಹಾಕಬೇಕು.

೭ ಕುಡಿಯುವ ನೀರಿನ ಬಾವಿಗಳಲ್ಲಿ ಜಂತುನಾಶಕ ಪುಡಿ ( ಪೊಟ್ಯಾಶಿಯಮ್ ಪರಮ್ಯಾಂಗನೇಟ ಅಥವಾ ಬ್ಲೀಚಿಂಗ್ ಪೌಡರ) ಹಾಕಬೇಕು.

## ೨ ವಿಷಮ ಜ್ವರ (ಟಾಯ್‌ಫಾಯಿಡ್)

**ಉತ್ಪತ್ತಿ** — ಇದಾದರೂ ಕಾಲರಾ ಬೇನೆಯಂತೆಯೇ ರೋಗಿಯ ಮಲಮೂತ್ರಗಳಿಂದ ಹೊರಟು ಹಾಲು, ನೀರು, ನೊಣಗಳ ಮುಖಾಂತರ ಉಳಿದವರಿಗೆ ತಲುಪಬಹುದು.

**ರೋಗಪ್ರಸಾರ** — ರೋಗಜಂತುವಿನಿಂದ ದೂಷಿತವಾದ ಹಾಲು, ನೀರು ಮುಂತಾದವುಗಳಿಂದ ಕಾಲರಾದಂತೆಯೇ ಇದಾದರೂ ಪ್ರಸಾರ ವಾಗುತ್ತದೆ.

**ಪ್ರತಿಬಂಧಕ ಉಪಾಯಗಳು** ·— ಊರಲ್ಲಿ ಈ ರೋಗ ಕಾಣ ಬಂದರೆ ಪ್ರತಿಬಂಧಕ ಇನಾಕ್ಯುಲೇಶನ್ ಕೂಡಲೆ ಮಾಡಿಸಿಕೊಳ್ಳಬೇಕು ಉಳಿದ ಉಪಾಯಗಳೆಲ್ಲ ಮಾರೀಬೇನೆಯಂತೆಯೇ

## ೩ ನಾರು

**ಉತ್ಪತ್ತಿ** ·— ಹಳ್ಳಿಗಳಲ್ಲಿ ಈ ಬೇನೆ ಹೆಚ್ಚಾಗಿ ಕಾಣಬರುತ್ತದೆ ನಾರುಬೇನೆಯಾದವನು ಹೊಕ್ಕುತುಂಬುವ ಬಾವಿಯಲ್ಲಿ ಇಲ್ಲವೆ ಕೆರೆಯಲ್ಲಿ ಇಳಿದಾಗ ಆತನ ನಾರುಹುಣ್ಣಿನಿಂದ ಕೂದಲಿನಂಥ ಸಣ್ಣ ನಾರಿನ ಹುಳದ ಮರಿಗಳು ನೀರಿನಲ್ಲಿ ಸೇರಿಕೊಳ್ಳುತ್ತವೆ ಅಂಥ ನೀರನ್ನು ಉಳಿದವರು ಕುಡಿದರೆ ಅವರಿಗೂ ಆ ಬೇನೆ ಬರುತ್ತದೆ ನೀರಿನಲ್ಲಿ ಅಂಥ ನಾರು ಮರಿಗಳು ಬಹಳ ದಿನ ಬದುಕುವದಿಲ್ಲ. ಆದರೆ ಎಷ್ಟೋಸಾರೆ ನೀರಿನಲ್ಲಿ " ಸೈಕ್ಲಾಪ್ಸ " ಎಂಬ ಸೂಕ್ಷ್ಮ ಪ್ರಾಣಿಗಳು ಇರುತ್ತವೆ ಅವುಗಳು ಈ ನಾರುಮರಿಯನ್ನು ನುಂಗಿಬಿಡುತ್ತವೆ ಮರಿಗಳು ಅವುಗಳ ಹೊಟ್ಟೆಯಲ್ಲಿ ೩-೪ ವಾರ ಬದುಕಬಲ್ಲವು ಈ ಸೈಕ್ಲಾಪ್ಸ್‌ಗಳು ನಾವು ಕುಡಿಯುವ ದೂಷಿತ ನೀರಿನ ಮುಖಾಂತರ ಹೊಟ್ಟೆಯಲ್ಲಿ ಸೇರುತ್ತವೆ ಹೊಟ್ಟೆಯಲ್ಲಿಯ ಜಠರರಸ ಈ ಜಂತುಗಳನ್ನು ಕೊಂದುಬಿಡಬಲ್ಲದು "ಸೈಕ್ಲಾಪ್ಸ್"ಗಳು ಸತ್ತಮೇಲೆ ಆದರ ಜಠರದಿಂದ

ನಾರಿನ ಮರಿಗಳು ಮನುಷ್ಯನ ಜಠರದಲ್ಲಿ ಬಂದು ಅಲ್ಲಿಂದ ಜಠರದ ಸ್ನಾಯುಗಳಲ್ಲಿ ಹಾಯ್ದು ದೇಹದ ಇತರ ಭಾಗಗಳಿಗೆ ಹೋಗುತ್ತವೆ. ನಾರುಹುಳವು ಕ್ರಮೇಣ ಬೆಳೆಯುತ್ತ ತ್ವಚೆಯ ಹೊರಗೆ ಬರಲು ಪ್ರಯತ್ನಿಸುತ್ತದೆ. ಆ ಸ್ಥಳದಲ್ಲಿ ಗುಳ್ಳೆ ಎದ್ದು ನಾರು ಹುಳವು ಹೊರಗೆ ಬರುವದು. ಆಗ ಬಹಳ ನೋವಾಗುವದು.

### ಪ್ರತಿಬಂಧಕ ಉಪಾಯಗಳು

೧ ನಾರು ಬಂದ ಮನುಷ್ಯನನ್ನು ಬಾವಿಯಲ್ಲಿ ಇಳಿಯಗೊಡಬಾರದು. ಆತನ ಬಟ್ಟೆಗಳನ್ನು ಅಲ್ಲಿ ಒಗೆಯಬಾರದು.

೨ ನಾರಿನ ಜಂತು ನೀರಿನಲ್ಲಿ ಇರುವ ಸಂಶಯ ಬಂದರೆ, ಅದರಲ್ಲಿ ಪೋಟ್ಯಾಶಿಯಮ್ ಪರಮ್ಯಾಂಗನೇಟ ಹಾಕಿ ಶುದ್ಧಮಾಡಬೇಕು.

೩ ಕುಡಿಯುವ ನೀರನ್ನು ಇಂಥ ಪ್ರಸಂಗದಲ್ಲಿ ದಪ್ಪವಾದ ಅರಿವೆಯಲ್ಲಿ ಸೋಸಿ ಇಲ್ಲವೆ ಕುದಿಸಿ ಕುಡಿಯಬೇಕು ಸಣ್ಣ ಛಿದ್ರಗಳಲ್ಲಿ ಸೈಕ್ಲಾಪ್ಸಗಳು ಹಾಯಲಾರವು.

## (ಬ) ಹವೆಯಿಂದ ಪ್ರಸಾರವಾಗುವ ರೋಗಗಳು

### ೧ ಮೈಲಿ (ಸಿಡುಬು)

**ಉತ್ಪತ್ತಿ:**—ಇದೂ ಒಂದು ಉಗ್ರವಾದ ಸಂಸರ್ಗರೋಗವು. ಉಷ್ಣ ಹವಾಮಾನವುಳ್ಳ ಪ್ರದೇಶಗಳಲ್ಲಿ ಇದು ಬಹಳವಾಗಿ ಕಾಣಬರುತ್ತದೆ. ಹಿಂದುಸ್ಥಾನದಲ್ಲಿಯಂತೂ ಇದು ಬಹಳ ಹಾವಳಿ ಮಾಡುತ್ತಿತ್ತು ಅದರಿಂದ




ಆಕೃತಿ ೬೧ ಹವೆಯಿಂದ ಪ್ರಸಾರವಾಗುವ ರೋಗಗಳು

ರಕ್ಷಣೆಮಾಡಿಕೊಳ್ಳುವದಕ್ಕೋಸ್ಕರ, ಸಣ್ಣ ಮಕ್ಕಳಿಗೆ ಹುಟ್ಟಿದ ೬ ತಿಂಗಳಲ್ಲಿ ಮೈಲಿ ಚುಚ್ಚುವ ಪರಿಪಾಠ ಬಹಳ ವರ್ಷಗಳಿಂದ ಬಂದಿದೆ. ಸೂಕ್ಷ್ಮವಾದ

ರೋಗಜಂತುಗಳೇ ಈ ಬೇನೆಗೆ ಕಾರಣ. ಈ ಜಂತುಗಳ ಬಗ್ಗೆ ವಿಜ್ಞಾನಿಗಳಿಗೂ ಕೂಡ ಎಲ್ಲ ಸಂಗತಿಗಳು ಇನ್ನೂ ಗೊತ್ತಾಗಿಲ್ಲ.

**ರೋಗಪ್ರಸಾರ**—ಹವೆಯ ಮುಖಾಂತರ, ರೋಗಿಯ ಪ್ರತ್ಯಕ್ಷ ಸ್ಪರ್ಶದಿಂದ ಇಲ್ಲವೆ ಆತನ ಬಟ್ಟೆಯಿಂದ ಇದು ನಿರೋಗಿಯಾದ ಮನುಷ್ಯನಲ್ಲಿ ಸೇರಬಹುದು. ಮತ್ತು ಪ್ರಸಾರವಾಗುವದು

**ಪ್ರತಿಬಂಧಕ ಉಪಾಯಗಳು**

೧ ಊರಲ್ಲಿ ಸುತ್ತಲೂ ಮೈಲಿ ಬೇನೆಯ ಲಕ್ಷಣಗಳು ಕಂಡುಬಂದರೆ, ಕೂಡಲೆ ಪ್ರತಿಬಂಧಕ ವ್ಹ್ಯಾಕ್ಸಿನೇಶನ್ (ಮೈಲಿ ಚುಚ್ಚಿಸಿಕೊಳ್ಳುವದು) ಮಾಡಿಸಿಕೊಳ್ಳಬೇಕು ಈ ರಸಿಕಯನ್ನು ಮೊದಲು ಡಾಕ್ಟರ ಜೆನ್ನರ ಎಂಬವನು ಕಂಡುಹಿಡಿದು ಲೋಕಕ್ಕೆ ಮಹದುಪಕಾರ ಮಾಡಿದ್ದಾನೆ

೨ ರೋಗಿಯನ್ನು ಸ್ವತಂತ್ರ ಕೋಣೆಯಲ್ಲಿ ಇಡಬೇಕು ಆತನ ಬಟ್ಟೆ, ಪಾತ್ರೆ ಮುಂತಾದವನ್ನು ಚೆನ್ನಾಗಿ ಕುದಿಸಿ ಉಪಯೋಗಿಸಬೇಕು

೩ ರಸಿಕೆಯ ಪ್ರತಿಬಂಧಕ ಶಕ್ತಿ ದೇಹದಲ್ಲಿ ಸುಮಾರು ೭ ವರ್ಷ ಉಳಿಯುವದು ಆದುದರಿಂದ ೭ ವರ್ಷಕ್ಕೊಮ್ಮೆ ಎಲ್ಲರೂ ಮೈಲಿ ಚುಚ್ಚಿಸಿಕೊಳ್ಳಬೇಕು ಅಂಥವರಿಗೆ ಸಾಮಾನ್ಯವಾಗಿ ಈ ಬೇನೆ ಅಂಟಿಕೊಳ್ಳುವದಿಲ್ಲ ಅವರಿಗೆ ಇದು ಬಂದರೂ ಅಷ್ಟು ಉಗ್ರವಾಗುವದಿಲ್ಲ ಚುಚ್ಚಿಸಿಕೊಳ್ಳದಿದ್ದರೆ ಎಷ್ಟೋ ಸಾರೆ ಕಣ್ಣು ಕುರುಡಾಗಬಹುದು. ಕಿವಿ ಕಿವುಡಾಗಬಹುದು, ಇಲ್ಲವೆ ಮೋರೆ ಕುರುಪಾಗಬಹುದು.

## ೨ ಕ್ಷಯ (ಟಿ ಬಿ ಟ್ಯೂಬರಕ್ಯೂಲೋಸಿಸ್)

**ಉತ್ಪತ್ತಿ**—ಈ ರೋಗವು ಹೆಚ್ಚಾಗಿ ಜನದಟ್ಟಣೆಯ, ಹವೆಯ, ಸೂರ್ಯಪ್ರಕಾಶಗಳ ಸರಿಯಾದ ಪೂರೈಕೆ ಇರದ ಪ್ರದೇಶಗಳಲ್ಲಿ ಕಾಣಬರುತ್ತದೆ ಕ್ಷಯರೋಗವೂ ವಿಶಿಷ್ಟ ಸೂಕ್ಷ್ಮ ಜಂತುಗಳಿಂದಲೇ ಉತ್ಪನ್ನವಾಗುತ್ತದೆ ಅನೇಕ ರೀತಿಯಿಂದ ರೋಗಜಂತುಗಳು ಮನುಷ್ಯನಲ್ಲಿ ಸೇರಬಹುದು ಸಾಮಾನ್ಯವಾಗಿ ಅಶಕ್ತರಲ್ಲಿ ಇದು ಬೇಗನೆ ಕಾಣಬಹುದು

**ರೋಗಪ್ರಸಾರ**– ಕ್ಷಯ ರೋಗಿಯ ಉಚ್ಛ್ವಾಸ, ಕೆಮ್ಮು, ಉಗುಳು, ಇವುಗಳಿಂದ ರೋಗಜಂತುಗಳು ಹವೆಯಲ್ಲಿ ಹೊರಬಿದ್ದು ಧೂಳಿಯ ಕಣ

ಗಳೊಡನೆ ಬೆರೆಯುತ್ತವೆ. ಅಂಥ ಹವೆಯನ್ನು ಉಳಿದವರು ಶ್ವಾಸದಲ್ಲಿ ತೆಗೆದುಕೊಂಡರೆ ಅವರಿಗೂ ಈ ರೋಗ ಅಂಟಬಹುದು.

ಕ್ಷಯರೋಗವು ಆಕಳು ಎಮ್ಮೆಗಳಿಗೂ ಆಗಬಹುದು. ಅಂಥವುಗಳ ಹಾಲನ್ನು ನಾವು ಕುಡಿದರೆ ಆ ಜಂತುಗಳು ನಮ್ಮಲ್ಲಿ ಬರುತ್ತವೆ ಸಣ್ಣ ಮಕ್ಕಳು ವಿಶೇಷವಾಗಿ ಹಾಲು ಕುಡಿಯುವದರಿಂದ ಅವರಿಗೆ ಈ ಬೇನೆ ಈ ರೀತಿ ಹಬ್ಬುವದು. ಸಾಮಾನ್ಯವಾಗಿ ಮಾಂಸಾಹಾರಿಗಳಿಗೆ ಕ್ಷಯರೋಗದ ಇಂಥ ಪ್ರಾಣಿಗಳ ಮಾಂಸ ತಿನ್ನುವದರಿಂದಲೂ ಕ್ಷಯವು ಆಗುತ್ತದೆ

ನೊಣಗಳೂ ಕೂಡ ಕ್ಷಯರೋಗಿಯ ಉಗುಳು, ಮಲ, ಮುಂತಾದ ವುಗಳ ಮೇಲೆ ಕುಳಿತು ಪುನಃ ನಮ್ಮ ಆಹಾರದ ಮೇಲೆ ಕುಳಿತು ರೋಗ ಪ್ರಸಾರಕ್ಕೆ ಕಾರಣವಾಗುತ್ತವೆ. ಆದ್ದರಿಂದ ಪೇಟೆಯಲ್ಲಿ ಮುಚ್ಚದೆ ಮಾರಲು ಇಟ್ಟಿರುವ ಆಹಾರವನ್ನು ತಿನ್ನುವದು ಯೋಗ್ಯವಲ್ಲ.

## ಪ್ರತಿಬಂಧಕ ಉಪಾಯಗಳು

೧ ಕ್ಷಯರೋಗಿಯು ಉಗುಳಿನಲ್ಲಿ ಜಂತುಗಳಿರುವುದರಿಂದ, ಬೇಕಾದಲ್ಲಿ ಆತನು ಉಗುಳುವದರಿಂದ ಹವೆಯಲ್ಲಿ ಕೂಡಲೇ ರೋಗಜಂತು ಗಳ ಪ್ರಸಾರವಾಗುತ್ತದೆ. ಅದನ್ನು ಪ್ರತಿಬಂಧಿಸಲು ಆತನು ಜಂತುನಾಶಕ ಔಷಧಿ ಇರುವ ಬಾಟಲಿಯಲ್ಲಿ ಉಗುಳಿ ಆಮೇಲೆ ಅದನ್ನು ಹುಗಿಯಬೇಕು ಇಲ್ಲವೆ ಸುಡಬೇಕು

೨ ಹಾಲಿನಲ್ಲಿ ಜಂತುಗಳಿರುವ ಸಂಭವವಿರುವದರಿಂದ ಅದನ್ನು ಕುದಿಸಿ ಕುಡಿಯಬೇಕು

೩ ಶುದ್ಧ ಹವೆ ಮತ್ತು ಸೂರ್ಯ ಪ್ರಕಾಶಗಳು ಈ ರೋಗಜಂತು ಗಳನ್ನು ನಾಶಮಾಡುತ್ತವೆ ಆದ್ದರಿಂದ ಯಾವಾಗಲೂ ಮನೆಯಲ್ಲಿ ಸ್ವಚ್ಛತೆ ಕಾಪಾಡಬೇಕು. ಅಲ್ಲದೆ, ದೊಡ್ಡ ಕಿಡಕಿಗಳಿದ್ದು, ಸೂರ್ಯಪ್ರಕಾಶ ಒಳಗೆ ಬರಲು ಅನುಕೂಲತೆಗಳು ಇರಬೇಕು.

೪ ಅಶಕ್ತ ಶರೀರದಲ್ಲಿ ಈ ಜಂತುಗಳು ಪ್ರಭಾವಯುಕ್ತವಾಗಿ, ಈ ಬೇನೆ ನೆಲೆಗೊಳ್ಳಬಹುದು ಆದ್ದರಿಂದ ನಾವು ಉತ್ತಮ ಆಹಾರ ಸೇವಿಸಿ ವ್ಯಾಯಾಮ ಮಾಡಿ ಸದೃಢರಾಗಿರಲು ಯತ್ನಿಸಬೇಕು.

೫ ಕ್ಷಯರೋಗಿಯನ್ನು ಉಪಚಾರಕ್ಕಾಗಿ ಕ್ಷಯರೋಗದ ಆರೋಗ್ಯ ಧಾಮಗಳಲ್ಲಿ ಇಡುವದು ಉತ್ತಮ

## (ಕ) ಗುಂಗಾಡು, ಚಿಕ್ಕಾಡಿನಿಂದ ಆಗುವ ಬೇನೆಗಳು

### ೧ ಚಳಿಜ್ವರ (ಮಲೇರಿಯಾ)

**ಉತ್ಪತ್ತಿ** — ಈ ಬೇನೆಯೂ ಒಂದು ಬಗೆಯ ಸೂಕ್ಷ್ಮ ಜಂತುಗಳಿಂದ ಉತ್ಪನ್ನವಾಗುತ್ತದೆ ಈ ಸಂಗತಿಯನ್ನು ಮೊದಲು ಕಂಡುಹಿಡಿದು ಮಲೇರಿಯಾ ಬೇನೆಯ ಬಗ್ಗೆ ಅಭ್ಯಾಸ ಮಾಡಿದವರೆಂದರೆ ಸರ್ ರೋನಾಲ್ಡ




ಆಕೃತಿ ೪೩ ಗುಂಗಾಡ, ಚಿಕ್ಕಾಡಿನಿಂದ ಆಗುವ ಬೇನೆಗಳು

ರಾಸ್ ಎಂಬವರು ಈ ಜಂತುಗಳು ಮನುಷ್ಯನ ದೇಹದಲ್ಲಿ ಬೆಳೆಯುತ್ತಿರುತ್ತವೆ ಗುಂಗಾಡು ಇನ್ನೊಬ್ಬ ನಿರೋಗಿ ಮನುಷ್ಯನನ್ನು ಕಚ್ಚಿದರೆ ಆಗ ಅದರ ಜೊಲ್ಲಿನಗುಂಟ ಅದರ ದೇಹದಲ್ಲಿಯ ರೋಗಜಂತುಗಳು ಅವನ ದೇಹದಲ್ಲಿ ಸೇರಬಹುದು ಮತ್ತು ಮಲೇರಿಯಾ ಜ್ವರವೂ ಆತನಿಗೆ ಬರಬಹುದು ಈ ರೋಗಜಂತುಗಳು ರಕ್ತದಲ್ಲಿಯ ರಕ್ತಗೋಲಕಗಳನ್ನು ಮುತ್ತಿ ನಾಶಮಾಡಹತ್ತುತ್ತವೆ ಆದ್ದರಿಂದ ರಕ್ತಸಂಚಯ ಕಡಿಮೆಯಾಗಿ ಅಶಕ್ತತೆ ಬರಹತ್ತುತ್ತದೆ

**ರೋಗಪ್ರಸಾರ** — ಈ ರೋಗಪ್ರಸಾರವು ಮುಖ್ಯವಾಗಿ “ ಅನಾಫೆಲಿಸ್ ” ಎಂಬ ಒಂದು ಜಾತಿಯ ಗುಂಗಾಡಿನಿಂದ ಪ್ರಸಾರವಾಗುತ್ತದೆ ಉಳಿದವುಗಳಿಂದ ಆಗುವದಿಲ್ಲ ಮಲೇರಿಯಾ ರೋಗಿಯನ್ನು ಕಡಿದು, ಬೇರೆ ಇನ್ನೊಬ್ಬ ರೋಗಿಯನ್ನು ಅದೇ ಗುಂಗಾಡು ಕಡಿದರೆ ಮಾತ್ರ ರೋಗ ಬರುತ್ತದೆ ಈ ಗುಂಗಾಡುಗಳು ಹಾರಾಡುವಾಗ ಗುಂಯ್ ಎಂದು ಶಬ್ದ ಮಾಡುತ್ತ ಕೂಡ್ರುವಾಗ ತಲೆಕೆಳಗೆ ಮಾಡಿ, ನೆಲಕ್ಕೆ ಕೋನಮಾಡಿ ಕೂಡುತ್ತವೆ ಉಳಿದವುಗಳು ನೆಲಕ್ಕೆ ಸಮಾಂತರವಾಗಿ ಕೂಡುತ್ತವೆ

**ಪ್ರತಿಬಂಧಕ ಉಪಾಯಗಳು** — ಚಳಿಜ್ವರವು ಸೊಳ್ಳೆಗಳಿಂದಲೇ ಆಗುವದರಿಂದ ಅವುಗಳು ಹುಟ್ಟದಂತೆ ಮೊದಲು ಉಪಾಯ ಕೈಕೊಳ್ಳ

ಬೇಕು ಆದರೂ ಅವು ಹುಟ್ಟಿದಲ್ಲಿ, ಅವುಗಳನ್ನು ನಾಶಮಾಡುವ ಉಪಾಯ ಗಳನ್ನು ಕೈಕೊಳ್ಳಬೇಕು ಅವು ಕೆಳಗಿನಂತೆ ಇವೆ.

೧ ಹೆಣ್ಣು ಸೊಳ್ಳೆ ನೀರ ಮೇಲೆ ತತ್ತಿಗಳನ್ನು ಇಡುತ್ತದೆ. ಆದ್ದರಿಂದ ಮನೆಯ ಸುತ್ತಲೂ ಎಲ್ಲಿಯೂ ನೀರು ನಿಲ್ಲದಂತೆ ನೋಡಿಕೊಳ್ಳ ಬೇಕು ಹಾಗೆ ಮಾಡುವದು ಸಾಧ್ಯವಿಲ್ಲದ ಪಕ್ಷದಲ್ಲಿ ನಿಂತ ನೀರಿನ ಮೇಲೆ ಚಿಮಣಿ ಎಣ್ಣೆ ಇಲ್ಲವೆ ಕ್ರೂಡ ಆಯಿಲ್ ಹಾಕಬೇಕು. ಇದರಿಂದ ಬೆಳೆಯುವ ಗುಂಗಾಡಿನ ಮರಿಗಳಿಗೆ ಹವೆ ಸಿಗದೆ ಸಾಯುತ್ತವೆ.

೨ ಬೆಳಕು ಮತ್ತು ಸ್ವಚ್ಛ ಹವೆಯಲ್ಲಿ ಅವು ಬರುವದಿಲ್ಲ. ಆದ್ದರಿಂದ ಮನೆಯಲ್ಲಿ ಎಲ್ಲ ಕಡೆಗೂ ಬೆಳಕು, ಗಾಳಿ ಬರುವಂತೆ ವ್ಯವಸ್ಥೆ ಮಾಡಬೇಕು.

೩ ಮಲಗುವಾಗ ಸೊಳ್ಳೆ ಪರದೆ ಉಪಯೋಗಿಸಬೇಕು

೪ ಚಳಿಜ್ವರದ ಲಕ್ಷಣಗಳು ತೋರಿದ ಕೂಡಲೇ ಕ್ವಿನಿನ್ ತೆಗೆದು ಕೊಳ್ಳಬೇಕು.

೫ ಚಳಿಜ್ವರದ ರೋಗಿಯನ್ನು ಯಾವಾಗಲೂ ಸೊಳ್ಳೆ ಪರದೆಯಲ್ಲೇ ಮಲಗಿಸಬೇಕು. ಅಂದರೆ ಅದು ಇನ್ನೊಬ್ಬರಿಗೆ ಹಬ್ಬುವ ಭಯ ವಿಲ್ಲ.

## ೨ ಪ್ಲೇಗು

**ಉತ್ಪತ್ತಿ**:— ಈ ಬೇನೆಯು ಮೊದಲು ಇಲಿಗಳ ಸೂಕ್ಷ್ಮಜಂತುಗಳಿಂದ ಪ್ರಾರಂಭವಾಗುತ್ತದೆ ಕೆಲವು ದಿನಗಳ ನಂತರ ಆ ಇಲಿಗಳು ಸಾಯುತ್ತವೆ ಅದರ ಮೈಮೇಲಿನ ಚಿಕ್ಕಾಡುಗಳು ರಕ್ತ ಹೀರುವಾಗ, ಅದರ ಸಂಗಡ ಈ ರೋಗ ಜಂತುಗಳೂ ಚಿಕ್ಕಾಡಿನ ಮೈಯಲ್ಲಿ ಹೋಗುತ್ತವೆ ಆದರೆ ಚಿಕ್ಕಾಡಿಗೆ ಜಂತುಗಳಿಂದ ಏನೂ ಬಾಧೆಯಾಗುವದಿಲ್ಲ ಇಲಿ ಸತ್ತ ಮೇಲೆ, ಬೇರೆ ರಕ್ತ ದೊರಕಿಸಲು ಚಿಕ್ಕಾಡುಗಳು ಹಾರಾಡುತ್ತ ಮನುಷ್ಯನಿಗೆ ಕಡಿಯುತ್ತವೆ ಆಗ ಚಿಕ್ಕಾಡಿನ ಮೈಯಲ್ಲಿದ್ದ ಪ್ಲೇಗ ರೋಗಜಂತುಗಳು ಮನುಷ್ಯನ ಮೈಯಲ್ಲಿ ಸೇರಿ ಪ್ಲೇಗಿನ ಗಂಟು ತರಿಸಬಹುದು. ಇಲ್ಲವೆ ಹಾಗೇ ಆತನು ಸಾಯಲೂ ಬಹುದು ಇದೊಂದು ಭಯಂಕರ ಸಾಂಸರ್ಗಿಕ ರೋಗವು.

**ರೋಗ ಪ್ರಸಾರ :—** ಚಿಕ್ಕಾಡುಗಳೇ ಈ ರೋಗ ಪ್ರಸಾರವನ್ನು ಇಲಿಯಿಂದ ಮನುಷ್ಯನಲ್ಲಿ ಮಾಡುತ್ತವೆ.

**ಪ್ರತಿಬಂಧಕ ಉಪಾಯಗಳು:** — ಈ ರೋಗದಿಂದ ರಕ್ಷಣೆ ಹೊಂದಲು ಕೆಳಗಿನ ಉಪಾಯಗಳನ್ನು ಮಾಡುವದು ಒಳಿತು.

೧ ಊರಲ್ಲಿ ಪ್ಲೇಗಿನ ಇಲಿಗಳು ಬೀಳುತ್ತಿದ್ದರೆ, ಮನೆಯಲ್ಲಿ ಇಲಿಗಳು ಆಗದಂತೆ ಜಾಗರೂಕತೆ ವಹಿಸಬೇಕು. ಬೆಕ್ಕು ಸಾಕಿ, ಬಲೆ ಇಟ್ಟು, ವಿಷದ ಗುಳಿಗೆಗಳನ್ನು ಇಟ್ಟು ಅವುಗಳನ್ನು ನಾಶ ಮಾಡಬಹುದು.

೨ ಚಿಕ್ಕಾಡುಗಳು ಮನೆಯಲ್ಲಿ ಆಗದಂತೆ ಸ್ವಚ್ಛವಾಗಿ ಇಡಬೇಕು.

೩ ಪ್ಲೇಗ ಬೇನೆ ಊರಲ್ಲಿ ಕಾಣಹತ್ತಿದ ತಕ್ಷಣ ಪ್ಲೇಗಿನ ಇನಾಕ್ಯುಲೇಶನ್ ಮಾಡಿಸಿಕೊಳ್ಳಬೇಕು.

೪ ಮನೆಯಲ್ಲಿ ಇಲಿ ಬಿದ್ದರೆ, ಆ ಮನೆಯನ್ನು ಬಿಟ್ಟು ಊರ ಹೊರಗೆ ಇಲ್ಲವೆ ಪರ ಊರಿಗೆ ಹೋಗುವದು ಒಳಿತು.

*Printer*

R G Hukkeri

Akshaya Press Dharwar

*Publisher*

S J Bapat

Madihal Dharwar

*Author*

S B Gajendragad

B A , B T

Radhakrishan Galli Hubli

*Edition*

First 15000 copies

*Year of Publication*

1955

*Price*

Rs 0-12 6

*Type of paper used*

D D 36 lbs M F White